# ಹಿಂಗಿದ್ರು ನಮ್ಮ ಕಾಮ್ತಿ

(ಡಾ. ಕೃಷ್ಣಾನಂದ ಕಾಮತರ ಕುರಿತ ಬರಹಗಳು)



ಕೃಷ್ಣಾನಂದ ಕಾಮತ ಪ್ರತಿಷ್ಠಾನ, ಹೊನ್ನಾವರ
ಕಾಮತ ಕುಟೀರ, ಲಕ್ಷ್ಮೀನಾರಾಯಣನಗರ,
ಹೊನ್ನಾವರ - 581 334
ಉತ್ತರ ಕನ್ನಡ ಜಿಲ್ಲೆ

# ಹಿಂಗಿದ್ರು ನಮ್ ಕಮ್ತಿ

(ಡಾ. ಕೃಷ್ಣಾನಂದ ಕಾಮತರ ಕುರಿತ ಬರಹಗಳು)

ಸಂಪಾದಕರು

**ಡಾ. ಜ್ಯೋತ್ಸ್ನಾ ಕಾಮತ್**

**ಕೃಷ್ಣಾನಂದ ಕಾಮತ ಪ್ರತಿಷ್ಠಾನ, ಹೊನ್ನಾವರ**

ಕಾಮತ ಕುಟೀರ, ಲಕ್ಷ್ಮೀನಾರಾಯಣನಗರ,

ಹೊನ್ನಾವರ-೫೮೧ ೩೩೪

ಉತ್ತರ ಕನ್ನಡ ಜಿಲ್ಲೆ

HINGIDRU NAM KAMTI - a collection of articles on Dr. Krishnananda Kamat in Kannada, Edited by Dr. Jyotsna Kamat, Published by Krishnananda Kamat Pratishthana, Kamat Kutira, Lakshminarayana Nagar, Honnavara-581 334. Uttara Kannada District.

Pages : viii + 104

Price : Rs. 35/-

Printers :
Satyashree Printers (P) Ltd.,
# 164, 5th Main Road,
Chamarajpet, Bangalore-560 018.
Telephone : 26525736

## ಸಂಪಾದಕೀಯ ನುಡಿ

ಕೃಷ್ಣಾನಂದ ಕಾಮತ ಪ್ರತಿಷ್ಠಾನದ ಎರಡನೇ ಪ್ರಕಟನೆಯಾಗಿ 'ಹಿಂಗಿದ್ರು ನಮ್ ಕಮ್ತಿ' ಓದುಗರ ಕೈ ಸೇರುತ್ತಲಿದೆ.

ಉತ್ತರ ಕನ್ನಡ ಜಿಲ್ಲೆಯ ಹಿರಿಯ ಸಾಹಿತಿ, ಛಾಯಾಚಿತ್ರಕಾರ, ವಿಜ್ಞಾನಿ ಹಾಗೂ ಪರಿಸರ ಪ್ರೇಮಿ ಆಗಿದ್ದ ಡಾ. ಕೃಷ್ಣಾನಂದ ಕಾಮತರು, ೩೦.೦೩.೨೦೦೨ರಂದು ಇದ್ದಕ್ಕಿದ್ದಂತೆ ಕಣ್ಮರೆಯಾದರು. ಬೆಂಗಳೂರಿನ ಮಿಥಿಕ್ ಸೊಸೈಟಿಯವರು ಅಗಲಿದ ಕಾಮತರಿಗೆ ಸಂತಾಪ ಸೂಚಿಸಲು ಸಭೆ ಕರೆದಿದ್ದರು. ಆ ಸಂದರ್ಭದಲ್ಲಿ ಕಾಮತರಿಗೆ ಆತ್ಮೀಯರಾಗಿದ್ದ, ಸದ್ಯ ಅನಂತಪುರ (ಆಂಧ್ರಪ್ರದೇಶ)ದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಶಾಸನತಜ್ಞ ಡಾ. ಆರ್. ಶೇಷಶಾಸ್ತ್ರಿಗಳು ಸ್ಮೃತಿ ಸಂಪುಟವೊಂದನ್ನು ಹೊರತರುವ ಪ್ರಸ್ತಾಪಮಾಡಿದರು. ಇನ್ನೊಬ್ಬ ಕಾಮತಾಭಿಮಾನಿ, ಇತಿಹಾಸ ಮತ್ತು ಶಾಸನತಜ್ಞ ಬೆಂಗಳೂರಿನ ಎ.ಪಿ.ಎಸ್. ವಾಣಿಜ್ಯ ಕಾಲೇಜಿನ ಪ್ರಾಂಶುಪಾಲರಾಗಿದ್ದ. ಡಾ. ಕೆ.ಆರ್. ಗಣೇಶ ಅವರ ಜೊತೆಗೂಡಿ ಶ್ರಮಿಸಿ, 'ಕಮ್ಮಟಿಗ' ಎಂಬ ಸಂಪುಟ ಹೊರತರುವಲ್ಲಿ ಯಶಸ್ವಿಯೂ ಆದರು. ಅದರಲ್ಲಿ ನಾಡಿನ ಅನೇಕ ಹಿರಿಯ ಲೇಖಕರು, ಕಲಾಭಿಮಾನಿಗಳು, ವಿಜ್ಞಾನದ ವಿದ್ಯಾರ್ಥಿಗಳು, ಕಂಪ್ಯೂಟರ್ ನಿಷ್ಣಾತರೆಲ್ಲ ತಾವು ಕಂಡುಕೊಂಡ ಕಾಮತರನ್ನು ನೆನಪಿಸಿಕೊಂಡಿದ್ದಾರೆ. ಕಾಮತರ ಕೆಲ ಚಿತ್ರ-ರೇಖಾ ಚಿತ್ರಗಳು, ಪತ್ರಗಳು, ಅಪ್ರಕಟಿತ ಬರಹಗಳು 'ಕಮ್ಮಟಿಗ' ದಲ್ಲಿ ಕಾಣಿಸಿಕೊಂಡವು.

ಹೊನ್ನಾವರದಲ್ಲಿ, ೨೦೦೩ನೇ ವರ್ಷದಲ್ಲಿ ನೋಂದಾಯಿಸಲ್ಪಟ್ಟ 'ಕೃಷ್ಣಾನಂದ ಕಾಮತ ಪ್ರತಿಷ್ಠಾನ'ದ ಮೊದಲ ಕೃತಿಯಾಗಿ, 'ಕಮ್ಮಟಿಗ' ೨೦೦೪ನೇ ವರ್ಷದ ಜನವರಿ ತಿಂಗಳು ೧೧ನೇ ತಾರೀಕಿಗೆ ಬಿಡುಗಡೆ ಆಯಿತು. ಈಗ ಕಾಮತರ, ಅಷ್ಟೊಂದು ಪರಿಚಿತವಿಲ್ಲದ ವ್ಯಕ್ತಿತ್ವದ ಕೆಲ ಪಹೇಲುಗಳನ್ನು ಪರಿಚಯಿಸುವ 'ಹಿಂಗಿದ್ರು ನಮ್ ಕಮ್ತಿ' ಬೆಳಕು ಕಾಣುತ್ತಲಿದೆ.

'ಕಮ್ಮಟಿಗ' ಸಂಪುಟವು ಗಾತ್ರ ಹಾಗೂ ಬೆಲೆಗಳಲ್ಲಿ ಹಿರಿದಾಗಿ ಎಲ್ಲರ ಕೈಗೆ ಎಟುಕುವಂತೆ ಇರಲಿಲ್ಲ. ಕಾಮತರನ್ನು ಅರಿಯಬಯಸುವ, ಕೇವಲ ಕೃತಿಗಳಿಂದಲೇ ಅವರನ್ನು ಬಲ್ಲ ಹಿರಿಕಿರಿಯರಿಗೆ, ಸುಲಭ ಬೆಲೆಯಲ್ಲಿ ಲಭ್ಯವಾಗಲೆಂದು ಈ ಕಿರು ಪುಸ್ತಕ ಹೊರತರುವ ಯೋಚನೆ ಬಂದಿತು. ಬದುಕಿದ್ದರೆ, ಕೃಷ್ಣಾನಂದರು ೨೯.೯.೨೦೦೪ರಂದು ೭೦ನೇ ವರ್ಷ ದಾಟುತ್ತಿದ್ದರು. ಜನ್ಮದಿನಸ್ಮೃತಿಯ ಸಂದರ್ಭದಲ್ಲಿ ಈ ಸಂಕಲನ ಬೆಳಕು ಕಾಣುತ್ತಿದೆ.

ಈ ಪುಸ್ತಕದ ಗಾತ್ರ ಕಿರಿದಾದರೂ, ವ್ಯಾಪ್ತಿ ತಕ್ಕಮಟ್ಟಿಗೆ ಹಿರಿದಾಗಿಯೇ ಇದೆ. ೮೭ರ ಪ್ರಾಯದವರಿಂದ ಹಿಡಿದು ೨೧ರ ಕಿರಿಯ ವಯಸ್ಸಿನವರು, ಕಾಮತರನ್ನು ಕದಾಚಿತ್ ಕಂಡೋ ಕಾಣದೆಯೋ, ಅವರ ಕೃತಿಗಳನ್ನು ಓದಿಯೇ, ತಾವು ಕಂಡಂತೆ ಚಿತ್ರಿಸಿದ್ದಾರೆ. ನಾಡಿನ ಹಿರಿಯ ಚಿಂತಕ, ಲೇಖಕ, ವಿಮರ್ಶಕ, ಶ್ರೀ ಕೆ.ವಿ. ಸುಬ್ಬಣ್ಣ ಇವರು, ಚಿಕ್ಕದಾದರೂ ತುಂಬ ಅರ್ಥಗರ್ಭಿತ ಸ್ಮರಣೆ ಮಾಡಿಕೊಂಡಿದ್ದಾರೆ. ರಾಜೀವಗೌಡ, ಮಲ್ಲಿಕಾರ್ಜುನ, ರವಿ ಹೆಗಡೆ, ಶ್ರೀಕಂಠದಾನಿಯರಂತಹ ಎಳೆಯರೂ, ಸುಬ್ಬಣ್ಣನವರಂತಹ ಆತ್ಮೀಯರೂ, ಕಾಮತರನ್ನು ಗುರುತಿಸುವ ಬಗೆಯಲ್ಲಿ ಕಂಡು ಬರುವ ಸಾಮ್ಯ ವಿಸ್ಮಯ ತರುವಂತಹದು. ಕಾಮತರ ಕಲೆ ಅಥವಾ ಬರಹಕ್ಕಿಂತ ಮಿಗಿಲಾಗಿ ಅವರೋರ್ವ ವ್ಯಕ್ತಿಯಾಗಿ ಬಾಳಿದ ಬಗೆ ಮತ್ತು ಅದು ಅವರ ಸಾಹಿತ್ಯದ ನಾನಾ ರೂಪಗಳಲ್ಲಿ ಬಿಂಬಿತವಾದ ರೀತಿಯನ್ನು ಇವರೆಲ್ಲ ಗಮನಿಸಿದ್ದಾರೆ, ಮೆಚ್ಚಿದ್ದಾರೆ, ಬರಹಕ್ಕಿಂತ ಬದುಕು ದೊಡ್ಡದು! ಎಂಬುದು ಕಾಮತರ ಬಲವಾದ ನಂಬಿಕೆಯಾಗಿತ್ತು.

ಕವಿ, ವಿ.ಜಿ. ಭಟ್ಟರು ಮಿತಭಾಷಿ. ಆದರೂ ಕಾಮತರನ್ನು ತುಂಬ ಹಚ್ಚಿಕೊಂಡಿದ್ದರು. ಅದೆಷ್ಟೋ ವೈಯಕ್ತಿಕ, ಸಾಹಿತ್ಯಿಕ ವಿಚಾರಗಳನ್ನು ಕಾಮತರಲ್ಲಿ ತೋಡಿಕೊಂಡಿದ್ದರು. ಕಾಮತ ದಂಪತಿಗಳಲ್ಲಿ ಭಟ್ಟರು ಇಟ್ಟುಕೊಂಡ ಮಮತೆಯ ಕುರುಹಾಗಿ, ಅವರ ಕೊನೆಯ ರಚನೆಗಳಲ್ಲಿ ಒಂದಾದ ಗುಜರಿ ಗುತ್ತಿಗೆ ಪದ್ಯವನ್ನು ಇಲ್ಲಿ ಸೇರಿಸಲಾಗಿದೆ.

ಡಾ. ವಿ.ಬಿ. ನಾಡಕರ್ಣಿಯವರು ಸ್ನೇಹಿತರಾಗಿ, ಕೆಲ ಕಾಲ ಸಹೋದ್ಯೋಗಿಯಾಗಿ, ನಾಲ್ಕು ದಶಕಗಳ ಕಾಲ ಕಾಮತರನ್ನು ನಿಕಟವಾಗಿ ಬಲ್ಲವರು. ತಮ್ಮ ಆತ್ಮೀಯ ನೆನಪುಗಳನ್ನು ಕೊಡಮಾಡಿದ್ದಾರೆ. ಕಾಲೇಜ ಜೀವನದಲ್ಲಿ ಕಂಡರಿತ ಡಾ. ವಿ.ಕೆ. ದೇಶಪಾಂಡೆ ಅವರು, ಕಾಲೇಜಿನ ಸಹಜೀವನ, ಕ್ಯಾಮರಾ ಸಾಹಸಗಳ ಕ್ಷಣಗಳನ್ನು ಮೆಲುಕು ಹಾಕಿದ್ದಾರೆ. ನಲವತ್ತು ವರ್ಷಗಳಿಂದಲೂ ಕಾಮತ ಕುಟುಂಬದೊಂದಿಗೆ ಪತ್ರ ಸ್ನೇಹ ಉಳಿಸಿಕೊಂಡು ಬಂದ ಅಮೇರಿಕನ್ ಮಹಿಳೆ, ಜೀನ್ ರೊಥ್, ಸಹಸ್ರಾರು ಮೈಲುಗಳ ಪ್ರಯಾಣದಲ್ಲಿ ತಮ್ಮ ಪುಟ್ಟ ಊರಿಗೆ ಬಂದು ಹೋಗಿದ್ದ ವಿದ್ಯಾರ್ಥಿಕಾಮತರನ್ನು ಸ್ಮರಿಸಿಕೊಂಡಿದ್ದಾರೆ. ಕಿಸೆಯಲ್ಲಿ ಕಾಸಿಲ್ಲದಿದ್ದರೂ, ದೇಶ ಸುತ್ತುವ ಹುಮ್ಮಸ್ಸ ಮತ್ತು ತೀರ ಅಪರಿಚಿತ ನಾಡಿನ ಮೂಲೆ ಮೂಲೆಯಲ್ಲಿ ಕೈಕೊಂಡಿದ್ದ ಪ್ರವಾಸಸಾಹಸದ ವೈಖರಿ ಅವರಿಗೆ ಅಚ್ಚರಿ ನೀಡಿತ್ತು.

ಹೂಗೊಪ್ಪಲು ಕೃಷ್ಣಮೂರ್ತಿ, ಕಾಮತರನ್ನು ತಮ್ಮ ಗ್ರಾಮಕ್ಕೆ ಕರೆದೊಯ್ದು, ಅವರೊಂದಿಗೆ ಕಳೆದ ದಿನಗಳನ್ನು ಉಲ್ಲೇಖಿಸಿದ್ದಾರೆ. ನಿಸರ್ಗದ, ಹಳ್ಳಿಗರ ಒಡನಾಟದಲ್ಲಿ ತನ್ನನ್ನು ತೆರೆದುಕೊಂಡು ಕ್ಯಾಮರಾವನ್ನು ದುಡಿಸಿಕೊಂಡ ಬಗೆ ಮತ್ತು ಪರಿಸರ ನಾಶದ ಬಗ್ಗೆ ಅವರಿಗಿದ್ದ ಆತಂಕವನ್ನು ನೆನಪಿಸಿಕೊಂಡಿದ್ದಾರೆ.

ಡಾ. ಕಮಲಾ ಹೆಮ್ಮಿಗೆ, ಕಾಮತರು ಇನ್ನಿಲ್ಲವಾದೊಡನೆ ಹೃದಯಸ್ಪರ್ಶಿ

ಲೇಖವೊಂದನ್ನು 'ವಿಜಯ ಕರ್ನಾಟಕ' ದಲ್ಲಿ ಬರೆದಿದ್ದರು. ಅದು ಅಸಂಖ್ಯರ ಮನಸ್ಸನ್ನು ತಟ್ಟಿತು. ಕೈಯಾರೆ, ಕಾಮತರಿಂದ 'ಮರುಪಯಣ' ದ ಪ್ರತಿಯನ್ನು ಪಡೆದು ಓದಿ, ಆನಂದಿಸಿದ್ದರು. ಕನ್ನಡ ಸಾಹಿತ್ಯದಲ್ಲೇ ಅದೊಂದು ವಿಶಿಷ್ಟ ಕೃತಿ, ಎಂಬುದು ಅವರ ನಂಬಿಕೆ. ಆ ಪುಸ್ತಕದ ಕುರಿತೇ ಇಲ್ಲಿ ಬರೆದಿದ್ದಾರೆ.

ಇಂಗ್ಲೆಂಡಿನಲ್ಲಿ ನೆಲೆಸಿರುವ ಡಾ. ಶ್ರೀವತ್ಸ ದೇಸಾಯಿ ಲೇಖನ ಬರೆಯುವಂತಾದದ್ದು ಆಕಸ್ಮಿಕ. ಕಂಪ್ಯೂಟರ್‌ದ ಬಳಕೆಯಷ್ಟಾಗಿ ರೂಢಿ ಮಾಡಿಕೊಳ್ಳದ ಇವರಿಗೆ 'ಕಾಮತ್.ಡಾಟ್.ಕಾಮ್' ಕಣ್ಣಿಗೆ ಬಿದ್ದದ್ದೇ ತಡವಾಗಿ ಅಂತೆ. ಆದರೆ ವೀಕ್ಷಿಸುತ್ತ ಹೋದಂತೆ, ಅದು ತನ್ನ ಮೇಲೆ ಬೀರಿದ ಪ್ರಭಾವವನ್ನು ದೀರ್ಘವಾದ ಈ-ಮೇಲ್ ಮೂಲಕ ತೋಡಿಕೊಂಡರು. ಅವರ ಕನ್ನಡ ಪ್ರೇಮ ಗುರುತಿಸಿ, ಗುರುಪುತ್ರರಾಗಿರುವ ಅವರಿಗೆ ಒಂದು ಕಿರುಲೇಖನ ಬರೆಯಲು ವಿನಂತಿಸಿಕೊಂಡಾಗ ಕೂಡಲೇ ಬರೆದು ಕಳಿಸಿದರು.

ಇಲ್ಲಿ ಕೆಲವು ಪತ್ರಗಳನ್ನು ಸೇರ್ಪಡೆ ಮಾಡಲಾಗಿದೆ. ಖ್ಯಾತ ಸಾಹಿತಿ, ದಿವಂಗತ ನಿರಂಜನರು, ಮೊದಲಲ್ಲಿ ಕಾಮತರ ಪುಸ್ತಕಗಳನ್ನು ಓದಿರಲಿಲ್ಲ. ಕಾಮತರನ್ನು ಭೇಟಿ ಮಾಡಿದ ಬಳಿಕ ಅವರ ಮೊದಲ ಕೃತಿಗಳನ್ನು ತರಿಸಿಕೊಂಡು ೧೯೮೮ರ ಸುಮಾರಿಗೆ ಓದಿದರು. ಪತ್ರ ಮುಖೇನ ತಿಳಿಸಿದ ಅವರ ಪ್ರಾಂಜಲವಾದ ಮೆಚ್ಚಿಗೆ ಮನಸ್ಸನ್ನು ಮುಟ್ಟುತ್ತದೆ.

ಪ್ರಸಿದ್ಧ ಸಾಹಿತಿ, ಡಾ. ಎಸ್.ಎಲ್. ಭೈರಪ್ಪನವರು ಕಾಮತರ ಬರವಣಿಗೆಯನ್ನು ತುಂಬ ಇಷ್ಟಪಟ್ಟವರು. ಮುಖತಃ ಅದನ್ನು ಅನೇಕ ಬಾರಿ ವ್ಯಕ್ತ ಮಾಡಿದ್ದಾರೆ. 'ಕಮ್ಮಟಿಗ' ದಲ್ಲಿ ಚಿಕ್ಕ, ಚೊಕ್ಕ ಸ್ಮರಣಾಂಜಲಿಯನ್ನು ಕೊಡಮಾಡಿದ್ದಾರೆ. ಕಾಮತರ 'ಕಾಲರಂಗ' ದ ಕುರಿತ ಪ್ರತಿಕ್ರಿಯೆ ಇಲ್ಲಿ ಕಾಣಿಸಿದ ಕಿರುಪತ್ರದಲ್ಲಿದೆ.

ಸಾಹಿತಿ ದಿ. ಎಂ.ಎಸ್.ಕೆ. ಪ್ರಭು ಅವರ ಕಾಮತರ 'ಮಧ್ಯ ಪ್ರದೇಶದ ಮಡಿಲಲ್ಲಿ' ಓದಿ ವ್ಯಕ್ತಪಡಿಸಿದ ಪ್ರತಿಕ್ರಿಯೆ, ಕಾಮತರ ಶಾಲಾ ಸಹಪಾಠಿ ಹೊನ್ನಾವರ ಬಳಿಯ ಹೊಸಾಡದ ಶಿ.ಹ. ನಾಯಕರು ಮುಂಬೈಯಿಂದ ಬರೆದ ಪತ್ರ, 'ಕಮ್ಮಟಿಗ' ಓದಿ ತನಗನಿಸಿದ ವಿಚಾರಗಳನ್ನು ಬರೆದ ಹೈದರಾಬಾದದ ಎಚ್.ವಿ. ಸಾವಿತ್ರಮ್ಮನವರ ಪತ್ರಗಳನ್ನು ಇಲ್ಲಿ ಕೊಡಲಾಗಿದೆ. ಸ್ಯಾರೆಕ್ಯೂಸ್‌ದ ಅರಣ್ಯಶಾಸ್ತ್ರದ ಕಾಲೇಜಿನಲ್ಲಿ ಪಿ.ಹೆಚ್.ಡಿ. ಮಾಡುತ್ತಿದ್ದಾನೆ. ಕಾಮತರನ್ನು ಸ್ಮರಿಸಿಕೊಂಡ ಮದನ್ ಪಂಡಿಲಾರ ಈ-ಮೇಲ್‌ನ ಪತ್ರವನ್ನು ಕೊಟ್ಟಿದೆ. ಇವೆಲ್ಲ ಪತ್ರಗಳು ಕಾಮತರ ಬರವಣಿಗೆ ಹಾಗೂ ವ್ಯಕ್ತಿತ್ವದ ಹೊಳಹುಗಳ ಮೇಲೆ ಬೆಳಕು ಚೆಲ್ಲುತ್ತವೆ.

'ಅನುಬಂಧ' ದಲ್ಲಿ ಕಾಮತರ ಸ್ವ-ವಿವರಗಳನ್ನು ಕೊಟ್ಟಿದೆ. ಭರದಿಂದ ನಾಶವಾಗುತ್ತಿರುವ ನಿಸರ್ಗದ ಸಮತೋಲದ ಕುರಿತು ಕೃಷ್ಣಾನಂದರಿಗೆ ಹೆಚ್ಚಿನ ಕಳವಳವಿತ್ತು. ಅವರ 'ಮರುಪಯಣ' ದಲ್ಲಿ ಹಾಗೂ ಇತರ ಹಲವಾರು ಲೇಖನಗಳಲ್ಲಿ

ಅದು ವ್ಯಕ್ತವಾಗಿದೆ. ಇಲ್ಲಿ 'ಪಶು-ಪಕ್ಷಿಗಳಲ್ಲಿ ಪರಿಸರ ಪ್ರಜ್ಞೆ' ಎಂಬ ಅಪರೂಪ ವಿಷಯದ ಕಿರುಲೇಖನವನ್ನು ಸೇರಿಸಿದೆ.

೧೯೯೭ರಲ್ಲಿ ಪ್ರಾರಂಭವಾದ ಕಾಮತ್ ಕುಟುಂಬದ ವೆಬ್‌ಸ್ಯಾಟ್, ಸಹಸ್ರಾರು ಮೆಚ್ಚಿಗೆಯ ಪತ್ರಗಳನ್ನು ಗಳಿಸಿತು. ಇಲ್ಲಿ ವಿಶ್ವವಿಖ್ಯಾತ ಪತ್ರಿಕೆ-ಸಂಸ್ಥೆಗಳ ಪ್ರತಿಕ್ರಿಯೆಯನ್ನು ಪ್ರಾತಿನಿಧಿಕವಾಗಿ ಕಾಣಿಸಿದೆ.

'ಅತ್ಯಂತ ಕಡಿಮೆ ಖರ್ಚಿನ ಆದರೆ ಅತಿಯಾಗಿ ಫಲಪ್ರದವಾದ ವೆಬ್‌ಸ್ಯಾಟ್' ಎಂದು ಹೆಗ್ಗಳಿಕೆಗೆ ಪಾತ್ರವಾದ ಕಾಮತ್ ವೆಬ್‌ಸ್ಯಾಟ್‌ನ ಕಿರು ಪರಿಚಯ ಇಲ್ಲಿದೆ.

ಕಾಮತರು ಕಣ್ಮರೆಯಾದ ಎರಡು ವರ್ಷಗಳ ಬಳಿಕವೂ ಪ್ರಪಂಚದ ಹೆಚ್ಚೆಚ್ಚು ಜನರಿಗೆ ಕಾಮತ್ ವೆಬ್‌ಸ್ಯಾಟ್ ಮೂಲಕ ತಲುಪುತ್ತಿದ್ದಾರೆ. ಡಬ್ಲ್ಯು.ಡಬ್ಲ್ಯು.ಡಬ್ಲ್ಯು.ಕಾಮತ್.ಕಾಮ್ ದಲ್ಲಿ ಪ್ರತಿಮಾಸದ ವೀಕ್ಷಕರ ಸಂಖ್ಯೆ ಮೂವತ್ತು ಲಕ್ಷ! ಎಂದು ಕಳೆದ ೧೦ ತಿಂಗಳಲ್ಲಿ ಸ್ಥಿರವಾಗಿರುವ ಅಂಕಿ ಸಂಖ್ಯೆಯನ್ನು ಕಂಪ್ಯೂಟರ್ ಸೂಚಿಸುತ್ತದೆ. ಕಾಮತರ ಈ ಪುಣ್ಯ ಸ್ಮರಣೆಯಂದು ಅವರು ಕ್ಲಿಕ್ಕಿಸಿದ ಹತ್ತು ಸಹಸ್ರ ಚಿತ್ರಗಳನ್ನು ನಮ್ಮ ಮಗ ವಿಕಾಸನು ಪ್ರಸಾರ ಮಾಡಬೇಕೆಂದಿದ್ದ. ಆ ಗುರಿ, ತಲುಪುವದರಲ್ಲಿದ್ದಾನೆ. ಉಳಿದ ಲಕ್ಷಗಟ್ಟಲೆ ಫ್ರೇಮ್‌ಗಳಿಗೆ ನ್ಯಾಯ ಒದಗಿಸುವ ಬಗೆಯನ್ನು ನಾವು ಯೋಚಿಸುತ್ತಲೇ ಇರುತ್ತೇವೆ. ವೆಬ್‌ಸ್ಯಾಟ್ ವೀಕ್ಷಣೆ, ಕಂಪ್ಯೂಟರ್ ಸೌಲಭ್ಯ ಹೊಂದಿರದ ಹಲವರಿಗೆ, ಕಾಮತರನ್ನು ತಿಳಿದುಕೊಳ್ಳಬೇಕೆಂದು ಆಸಕ್ತಿ ಉಳ್ಳವರಿಗೆ ಸಹಾಯವಾಗಲಿ, ಎಂಬ ಉದ್ದೇಶದಿಂದ ಈ ಪುಸ್ತಕ ಹೊರತರಲಾಗಿದೆ.

ಕಾಮತರ ಬಗ್ಗೆ ಲೇಖನಗಳಿಗಾಗಿ ವಿನಂತಿಸಿಕೊಂಡೊಡನೆ ಇಲ್ಲಿ ಕಾಣಿಸಿಕೊಂಡ ಬರಹಗಾರರೆಲ್ಲ ಅವನ್ನು ಸಕಾಲದಲ್ಲಿ ಪೂರೈಸಿ, ಕಾಮತರ ಬಗೆಗಿನ ಮಮತೆ-ಗೌರವಗಳನ್ನು ಮೆರೆದಿದ್ದಾರೆ. ಅವರೆಲ್ಲರಿಗೆ ತುಂಬ ಆಭಾರಿಯಾಗಿದ್ದೇನೆ.

ಕಾಲಕಾಲಕ್ಕೆ ಉಪಯುಕ್ತ ಸಲಹೆ ನೀಡುತ್ತ, ನನ್ನ ಪರವಾಗಿ ಓಡಾಡಿ, ಈ ಪುಸ್ತಕದ ಮುದ್ರಣಕ್ಕೆ ಹೆಚ್ಚಿನ ನೆರವು ನೀಡಿದ ಆತ್ಮೀಯ, ಡಾ. ಕೆ.ಆರ್. ಗಣೇಶ ಅವರಿಗೆ ಅತ್ಯಂತ ಋಣಿಯಾಗಿದ್ದೇನೆ. ಅಲ್ಪಾವಧಿಯಲ್ಲಿ ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಸತ್ಯಶ್ರೀ ಪ್ರಿಂಟರ್ಸ್‌ನ ಶ್ರೀ ಲಿಂಗಪ್ಪ ಅವರಿಗೆ ಹಾಗೂ ಕಂಪ್ಯೂಟರೀಕರಣ ಮಾಡಿದ ಶ್ರೀ ಕೆ.ವಿ. ರಾಘವೇಂದ್ರಕುಮಾರ್ ಅವರಿಗೂ ಹೆಚ್ಚಿನ ಕೃತಜ್ಞತೆಗಳು.

**ಜ್ಯೋತ್ಸ್ನಾ ಕಾಮತ್**

೧.೯.೨೦೦೪

೧೧೦, ಶಶಿಕಿರಣ್
೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫.

## ಪರಿವಿಡಿ


| | | | |
|---|---|---|---|
| | ಸಂಪಾದಕಿಯ ಮಾತು | | |
| ೧. | ಕೃಷ್ಣಾನಂದರ ಸ್ಮರಣೆ | ಕೆ.ವಿ. ಸುಬ್ಬಣ್ಣ | ೧ |
| ೨. | ಗುಜರಿ ಗುತ್ತಿಗೆ | ವಿ.ಜಿ. ಭಟ್ಟ | ೬ |
| ೩. | My Friend, Krishnanand | Dr. V.B. Nadkarni | ೭ |
| ೪. | From India to Oregan USA | Jeanne Roth | ೧೭ |
| ೫. | ಕೃಷ್ಣಾನಂದರ 'ಪೂರ್ವಾಶ್ರಮ' | ಡಾ. ವಿ.ಕೆ. ದೇಶಪಾಂಡೆ | ೧೯ |
| ೬. | ಕಾಮತರು, ನಾನು ಕಂಡಂತೆ | ಹೂಗೊಪ್ಪಲು ಕೃಷ್ಣಮೂರ್ತಿ | ೨೫ |
| ೭. | ನಮ್ಮ ಕಾಮತರು | ರವಿ ಹೆಗಡೆ | ೩೨ |
| ೮. | ಉಕ್ಕಿ ಬಂದ ನೆನಪು | ಎಂ.ಜೆ. ರಾಜೀವಗೌಡ | ೩೭ |
| ೯. | ಕಾಮತ 'ಪೋರಿ' ಮತ್ತು ಪ್ರೇಮ ಸಂಬಂಧ | ಡಾ. ಶ್ರೀವತ್ಸದೇಸಾಯಿ | ೪೧ |
| ೧೦. | ಅವರೂ ಅಮೇರಿಕೆಗೆ ಹೋಗಿದ್ದರು | ಕೆ.ಜಿ. ಶ್ರೀಕಂಠದಾನಿ | ೪೫ |
| ೧೧. | ಮನ ಮುಟ್ಟುವ ಮರುಪಯಣ | ಡಾ. ಕಮಲಾ ಹೆಮ್ಮಿಗೆ | ೪೭ |
| ೧೨. | ಕಾಣದ ಗುರುವಿಗೆ ನಮನ | ಡಿ.ಜಿ. ಮಲ್ಲಿಕಾರ್ಜುನ | ೫೩ |

ಕೃಷ್ಣಾನಂದ ಕಾಮತರಿಗೆ ಬರೆದ ಪತ್ರಗಳು
ಡಾ. ಎಸ್.ಎಲ್. ಭೈರಪ್ಪ
ನಿರಂಜನ
ಎಚ್.ವಿ. ಸಾವಿತ್ರಮ್ಮ
ಶಿ.ಹ. ನಾಯಕ
ಎಮ್.ಎಸ್.ಕೆ. ಪ್ರಭು
ಮದನ್ ಪಂಡಿಲಾ

## ಅನುಬಂಧ

೧. ಕೃಷ್ಣಾನಂದ ಕಾಮತರ ಸ್ವ-ವಿವರ
೨. ಕಾಮತರ ಒಂದು ಅಪರೂಪದ ಲೇಖನ;
ಪಶು ಪಕ್ಷಿಗಳಲ್ಲಿ ಪರಿಸರ ಪ್ರಜ್ಞೆ
೩. 'ಕಾಮತ್ ವೆಬ್‌ಸ್ಯಾಟ್' ಕುರಿತ
ಖ್ಯಾತ ವಿದೇಶಿ ಪತ್ರಿಕೆಗಳ ಪ್ರತಿಕ್ರಿಯೆ

# ಕೃಷ್ಣಾನಂದರ ಸ್ಮರಣೆ

- ಕೆ.ವಿ. ಸುಬ್ಬಣ್ಣ

**ಕಾ**ಮತ ದಂಪತಿಗಳ (ಕೃಷ್ಣಾನಂದ ಮತ್ತು ಜ್ಯೋತ್ಸ್ನಾ ಅವರು) ಪರಿಚಯ ನನಗಾದದ್ದು ಸು. ಮೂವತ್ತೈದು - ನಲವತ್ತು ವರ್ಷಗಳ ಹಿಂದಕ್ಕಿರಬೇಕು; ಜ್ಯೋತ್ಸ್ನಾ ಅವರು ಶ್ರೀಮತಿ ಕಾಮತರಾಗುವುದಕ್ಕಿಂತ ಮೊದಲು. ಈ ದೀರ್ಘಾವಧಿಯಲ್ಲಿ, ಮೂವರೂ ಕೂಡಿ ಮಾತಾಡಿದ್ದು ಬಹುಶಃ, ಒಮ್ಮೆ ಮಾತ್ರ. ಪ್ರತ್ಯೇಕವಾಗಿ ಇಬ್ಬರನ್ನೂ ಹತ್ತು ಹದಿನೈದು ಸಲವಷ್ಟೇ ಭೇಟಿ ಮಾಡಿ ಮಾತಾಡಿದ್ದಿರಬೇಕು. ಮಾತಾಡಿದ್ದು ಕೂಡಾ ತಾಸುಗಟ್ಟಲೆ, ದಿನಗಟ್ಟಲೆ ಅಲ್ಲ, ಇಬ್ಬರೂ ಲೇಖಕರ ಬಹುತೇಕ ಎಲ್ಲ ಕೃತಿಗಳನ್ನೂ ನಾನು ಆಸಕ್ತಿಯಿಂದ ಓದಿಕೊಂಡಿದ್ದೇನೆ. ಅವರ ಓದಿನಿಂದ ಮತ್ತು ಆಗಾಗ ಕೇಳಿಕೊಳ್ಳುತ್ತಿದ್ದ ಅವರ ಚರಿತಗಳಿಂದ ನನ್ನ ಸ್ನೇಹವು ಬೆಳೆದು ಕೊಂಡಿತು. ಎಷ್ಟೆಂದರೆ, ನನ್ನ ಮನೋಲೋಕದಲ್ಲಿ ಸಾಕಷ್ಟು ವಿಹರಿಸುವ ವ್ಯಕ್ತಿಗಳು ಇವರು, ಕುಟುಂಬ ಮಿತ್ರರು, ಆಪ್ತರು.

'ಕೃಷ್ಣಾನಂದರನ್ನು ನೆನೆದಾಗ ಪುಟ್ಟದೊಂದು ಸರಣಿಯೇ ನನಗೆ ಪ್ರತ್ಯಕ್ಷವಾಗುತ್ತದೆ; ಮೊದಲಿಗೆ ಶಿವರಾಮ ಕಾರಂತರು; ಅವರ ಜತೆಜತೆಗೇ ಗೋಕರ್ಣದ ಗೌರೀಶರು; ಅನಂತರ ಮುಂದಣ ಪೀಳಿಗೆಯ ಬಿ.ಜಿ.ಎಲ್. ಸ್ವಾಮಿ - ಕೃಷ್ಣಾನಂದ ಕಾಮತರ ಅವಳಿ. ಈ ಸರಣಿಯ ವ್ಯಕ್ತಿಗಳಲ್ಲಿ ಒಂದು ವಿಶಿಷ್ಟ ರೀತಿಯ ವ್ಯಕ್ತಿಪಾಕವು ಹದಗೊಂಡಿರುವಂತೆ ನನಗೆ ತೋರುತ್ತದೆ. ಮೊದಲನೆಯದಾಗಿ, ದಣಿವಿಲ್ಲದ ಜೀವೋತ್ಸಾಹ ಮತ್ತು ಅದರಿಂದ ಚಿಮ್ಮುವ ಸರ್ವತ್ರ ಕುತೂಹಲ - ಎಲ್ಲವನ್ನೂ ಮುಟ್ಟಿಮೂಸಿ ಕಂಡು ಕಲಿಯುವ ಅಪಾರ ಕುತೂಹಲ. ಎರಡನೆಯದಾಗಿ, ತಾನು ಕುತೂಹಲದಿಂದ ಕಲಿಯುವ ಜತೆಜತೆಯಲ್ಲೇ ಆ ಕಲಿಕೆಗಳನ್ನೆಲ್ಲ ಹಂಚಿಕೊಳ್ಳುವ ಕಾತರ. ಮೂರನೆಯದಾಗಿ, ಈ ಗುಣಗಳಿಗಿಂತ ಪ್ರತ್ಯೇಕವೆನ್ನಿಸುವ, ಅಸಾಧಾರಣ ಸಂಯಮ.

ಮನುಷ್ಯರಲ್ಲಿ ಹಲವರಿಗೆ ಅಪಾರ ಉತ್ಸಾಹ, ಕುತೂಹಲಗಳಿರುತ್ತವೆ. ಆದರೆ ಅಂಥವರೆಲ್ಲರಿಗೂ ಒಡನಾಡಿಗಳ ಜತೆ ಆಗಾಗಲೇ ಹಂಚಿಕೊಳ್ಳುವ ಆದಮ್ಯ ಕಾತರವಿಲ್ಲದಿರಬಹುದು. ಅಥವಾ ಇದ್ದರೂ ಅದು, ಹಂಚಿಕೊಳ್ಳುವ ಕಾತರವಾಗದ, ತಾನು ಕಲಿತದ್ದನ್ನು ಅನ್ಯರಿಗೆ ಕಲಿಸತಕ್ಕದ್ದು ಎಂಬ ಧ್ಯೇಯ ನಿಷ್ಠೆಯಾಗಿಬಿಡುತ್ತದೆ. ಅಂಥ ಕಲಿಸುವವರಲ್ಲಿ ಅತ್ಯುತ್ತಮರು ಒಳ್ಳೆಯ ಮೇಷ್ಟರಾಗಬಹುದು; ಹಾಗಲ್ಲದವರು, ತಮ್ಮ ತಮ್ಮ ಕಲಿಕೆಯನ್ನು, ತಮಗೆ ಸಾಕ್ಷಾತ್ಕಾರವಾಗಿರುವ ಪರಮಸತ್ಯವೆಂದು ನಂಬಿ, ಜತೆಯವರಿಗೆ ಅದನ್ನು ಪಾಠಮಾಡಲು ದೀಕ್ಷೆ ಹೊತ್ತಿರುವ ದುರಹಂಕಾರಿಗಳಾಗುತ್ತಾರೆ. ಇಂಥವರು ಕಲಿತದ್ದನ್ನು ಪಾಠಮಾಡುತ್ತಾರೆ. ಹಂಚಿಕೊಳ್ಳುವುದಿಲ್ಲ.

ಅಥವಾ, ಮೇಲಿನ ಎರಡೂ ಗುಣಗಳಿರುವವರು, ತಾವು ಕಲಿತದ್ದನ್ನು ಜನರಲ್ಲಿ ಹಂಚಿಕೊಳ್ಳುತ್ತಾರೆ ಎನ್ನೋಣ. ಆದರೆ, ಅವರ ಕಲಿಕೆಯು, ಹಂಚಿಕೆಯಿಂದ ಖರ್ಚಾಗಿ ಹೋಗುವುದಿಲ್ಲ; ಹಂಚಿದ ಮೇಲೂ ಅವರಲ್ಲಿ ಉಳಿದೇಬಿಡುತ್ತದೆ. ಹಣದ ಹಾಗೆ ಖರ್ಚಾಗಿಹೋದರೆ, ಕಳೆದೂ ಉಳಿಯುವ ಮತ್ತು ಉಳಿದ ಸಂಚಯಗೊಳ್ಳುವ ಆ ಕಲಿಕೆಯು 'ಜ್ಞಾನಶಕ್ತಿ' ಯಾಗುತ್ತದೆ; 'ಜ್ಞಾನಶಕ್ತಿ' ಯನ್ನು 'ಅಧಿಕಾರ' ವಾಗಿ, 'ಹಣ' ವಾಗಿ ಕೂಡಾ ಪರಿವರ್ತಿಸಿಕೊಳ್ಳಲು ಬರುತ್ತದೆ. ಅಪಾಯವಿರುವುದು ಇಲ್ಲಿ.

ಸಾಮಾನ್ಯರ ಮಾತಲ್ಲ. ಜಗತ್ತಿನ ಅನೇಕಾನೇಕ ಶ್ರೇಷ್ಠ ಜ್ಞಾನಿವಿಜ್ಞಾನಿಗಳು ಹೀಗೆ 'ಅಧಿಕಾರ' ವನ್ನು ಸೃಷ್ಟಿಸಿದ್ದಾರೆ. ಅದು 'ಹಣ' ವಾಗಿ ಪರಿವರ್ತನಗೊಂಡಿದೆ. ಅಧಿಕಾರ, ಹಣಗಳು ವಾಣಿಜ್ಯದ ವಿಷವರ್ತುಲದಲ್ಲಿ ಸಿಕ್ಕು ಅದು ಜನರನ್ನು ಅಮಾನವೀಯವಾಗಿ ಶೋಷಿಸಿದೆ, ರಾಕ್ಷಸೀಯವಾಗಿ ನಾಶಮಾಡಿದೆ, ಮುಂದಣ ನೆಲೆಗಳಲ್ಲಿ ಅನಿಯಂತ್ರಿತವಾಗಿ ವ್ಯಾಪಿಸುವ ಈ ಪ್ರಕ್ರಿಯೆಯು ಜ್ಞಾನಸಾಧಕನ ಮನಸ್ಸಿನಲ್ಲಾದರೂ ಸದಾ ಎಚ್ಚರದಲ್ಲಿರಬೇಕು. ಅಧ್ಯಯನ ಅಧ್ಯಾಪನಗಳಲ್ಲಿ ತೊಡಗಿದವನು, ಮೂಲತಃ ತಾನಾದರೂ, ಅಪಾರ ಸಂಯಮಿಯಾಗಿರತಕ್ಕದ್ದು; ತನ್ನ ಪ್ರಾಣ ಪೋಷಣೆಗೆ ಅತ್ಯಗತ್ಯವಾಗಿರುವಷ್ಟನ್ನೇ ಮಾತ್ರ ಈ ಜಗತ್ತಿನಿಂದ ದುಡಿದು ಪಡೆದುಕೊಳ್ಳುತ್ತೇನೆ ಮತ್ತು ಉಳಿದದ್ದನ್ನು ತ್ಯಜಿಸುತ್ತೇನೆ, ಎಂಬ ಕಠಿಣ ನಿಷ್ಠೆ ಆತನಿಗಿರತಕ್ಕದ್ದು. ತ್ಯಕ್ತೇನ ಭುಂಜೀಥಾ ಎಂಬ ಜಗತ್‌ಶ್ರದ್ಧೆಯಿರುವ 'ಸಾಕ್ಷರ' ನು ಹಿಂದುಮುಂದಾಗಿ 'ರಾಕ್ಷಸ' ನಾಗಲಾರ.

ಕೃಷ್ಣಾನಂದರ ಬಗ್ಗೆ ಯಾಕೆ ಅಂಥ ವಿಶೇಷ ಗೌರವವು ನನ್ನಲ್ಲಿ ಮೂಡಿಕೊಂಡಿತು ಎನ್ನುವುದನ್ನು ಸ್ಪಷ್ಟಗೊಳಿಸಲು ಇಷ್ಟುದ್ದ ಹೇಳಬೇಕಾಯಿತು.

ಕೃಷ್ಣಾನಂದರನ್ನು ಇನ್ನು ಮೂವರು ಪುಟ್ಟ ಸರಣಿಯ ಉದಾಹರಣೆಯೊಡನೆ

ಪ್ರಸ್ತಾಪಿಸಿದೆ. ಆದರೆ. ಇಪ್ಪತ್ತನೇ ಶತಮಾನದ ಕನ್ನಡ ಲೇಖಕರಲ್ಲಿ ಅಂಥದೊಂದು ಪರಂಪರೆಯೇ ಬಂದಿದೆ ಎನ್ನುವುದನ್ನೂ ನಾನು ಮರೆತಿಲ್ಲ. ಲೇಖಕರಾಗಿ ಅಷ್ಟು ಪ್ರಸಿದ್ಧರಾಗದ ದಿ. ಪೈಲೂರು ಲಕ್ಷ್ಮೀನಾರಾಯಣರಾಯರಂಥ ಒಂದು ಮೂಲೆಯವರನ್ನೂ ಈ ಪರಂಪರೆಯಲ್ಲಿ ತಪ್ಪದೆ ನೆನೆಸಿಕೊಳ್ಳಬೇಕು. ಲೇಖಕರೇನು, ನಮ್ಮ ಸಮುದಾಯಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ, ಶ್ರದ್ಧೆ ಸಂಯಮ ದೀಕ್ಷಿತರಾಗಿರುವ ಹಲವು ಜನರು ಬಾಳಿಕೊಂಡಿರುತ್ತಾರೆ.

ಕೃಷ್ಣಾನಂದರು ಬರೆದಿರುವ ಪುಸ್ತಕಗಳ ಸಂಖ್ಯೆ ಸುಮಾರು ಒಂದೂವರೆ ಡಜನ್‌ನಷ್ಟು. ಇದರ ಎರಡು ಮೂರರಷ್ಟು ಸಂಖ್ಯೆಯ ಪುಸ್ತಕಗಳನ್ನು ಅವರು ಬರೆಯಬಲ್ಲವರಾಗಿದ್ದರು - ಪ್ರಕಟಿಸಲು ಮುಂದಾಗಿ ಯಾರಾದರೂ ಕೇಳಿಕೊಂಡಿದ್ದರೆ. ಅದಲ್ಲದೆ, ನಮ್ಮ ವಿಶ್ವವಿದ್ಯಾಲಯಗಳಲ್ಲಿ ಯಾವುದಾದರೊಂದು, ಅವರಿಗೆ ಒಳ್ಳೆಯ ಸಹಾಯಕರ ತಂಡವೊಂದನ್ನು ಒದಗಿಸಿ, ವಹಿಸಿಕೊಟ್ಟಿದ್ದರೆ ಅವರು ಭಾರತೀಯ ಭಾಷೆಗಳಲ್ಲೇ ಉತ್ತಮವಾದೊಂದು 'ಕನ್ನಡ ವಿಶ್ವಕೋಶ ಸಂಪುಟ' ವನ್ನು ಸಿದ್ಧಗೊಳಿಸಬಲ್ಲವರಾಗಿದ್ದರು. ಅಥವಾ ಹಾಗೆ ಯೋಚಿಸದೆ, ಅವರು ಬರೆದಿರುವಷ್ಟನ್ನೇ ಗಮನಿಸಬಹುದು.

ಅಮೆರಿಕದಲ್ಲಿ ಕಲಿಯಲಿಕ್ಕಿದ್ದಾಗಲೇ ಅವರು, ಅಲ್ಲಿನ ಪರಿಚಿತ ಜನಸಮುದಾಯ ಪರಿಸರಗಳನ್ನು ತಮ್ಮದೇ ವಿಶಿಷ್ಟ ದೃಷ್ಟಿಕೋನದಿಂದ ಅವಲೋಕಿಸಿ ವಿಮರ್ಶಿಸಿ, ಅದನ್ನು ಕನ್ನಡಿಗರ ಜತೆ ಹಂಚಿಕೊಂಡರು. 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಈ ಮೊದಲ ಬರವಣಿಗೆಯಿಂದಲೇ ಅವರು ಕನ್ನಡದಲ್ಲಿ ಪ್ರಸಿದ್ಧರಾಗಿಬಿಟ್ಟರು. ಆ ಮೇಲೆ ಅವರು ಭಾರತದಲ್ಲಿ ಎಲ್ಲೆಲ್ಲಿ, ಅಗತ್ಯದಿಂದಲೋ ಕುತೂಹಲದಿಂದಲೋ, ಇದ್ದು ತಿರುಗಾಡಿದ ಸಮುದಾಯಗಳನ್ನು ತಮ್ಮ ಅದೇ ವಿಶಿಷ್ಟ ದೃಷ್ಟಿಕೋನದಿಂದ ಕಂಡು ಅದನ್ನು ಕನ್ನಡದಲ್ಲಿ ಆಪ್ತವಾಗಿ ಹೇಳಿಕೊಂಡರು.

'ವಂಗದರ್ಶನ' ದಿಂದ 'ಮಧ್ಯಪ್ರದೇಶದ ಮಡಿಲಲ್ಲಿ' ತನಕ ಸುಮಾರಿನ ಪುಸ್ತಕ ಸರಣಿಯಲ್ಲಿ ಅವರು ನಮ್ಮ ಮಧ್ಯ ಇಂಡಿಯಾ (ಬಂಗಾಲ - ರಾಜಸ್ಥಾನ - ಮಧ್ಯಪ್ರದೇಶ ಇ.,) ವ್ಯಾಪ್ತಿಯಷ್ಟನ್ನೂ ಕನ್ನಡಿಗರಿಗೆ ಪರಿಚಿತಗೊಳಿಸಿದರು. ಈ ಭಾಗಗಳಲ್ಲಿನ ಬುಡಕಟ್ಟು ಜನಾಂಗಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡಿ ಬರೆದರು; ಹಾಗೆ ಅವರ 'ಮಾನವಶಾಸ್ತ್ರ' ದ ಅಧ್ಯಯನಗಳು ಕನ್ನಡಕ್ಕೆ ದೊರೆತವು. ಇದಲ್ಲದೆ, ತನ್ನ ಉತ್ತರ ಕನ್ನಡ ಕರಾವಳಿ ಪ್ರದೇಶ, ಮಾತ್ರವಲ್ಲ, ತಾನು ಸಂಚರಿಸಿದ ಇನ್ನೂ ಅನೇಕ ಪ್ರದೇಶಗಳನ್ನು ಕುರಿತೂ ಪರಿಚಯಮಾಡಿಸಿಕೊಟ್ಟರು.

ಇದು ಅವರ ಬರವಣಿಗೆಯ ಒಂದು ಭಾಗವಷ್ಟೇ. ಇನ್ನೊಂದು ಭಾಗ, ನಮ್ಮ ತರುಣ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತವಾದ ಭಾಗ, ಪ್ರಾಣಿ - ಸಸ್ಯ - ಪರಿಸರ ಲೋಕ ಕುರಿತದ್ದು. ಪಶು - ಪಕ್ಷಿ - ಉರಗ - ಕೀಟಗಳ ಬಗ್ಗೆ, ಸಸ್ಯ ಪ್ರಪಂಚದ ಬಗ್ಗೆ ಅವರು ಸರಳವಾಗಿ ಬರೆದಿರುವ ಶಾಸ್ತ್ರೀಯ ಪುಸ್ತಕಗಳು ಅಪೂರ್ವವಾದವು. ಒಟ್ಟಿನಲ್ಲಿ, ಕನ್ನಡ ವಿಶ್ವಕೋಶದ ಸಂಪನ್ನ ಆವೃತ್ತಿಯೊಂದು ಅವರಿಂದ ನಮಗೆ ದೊರಕದಿದ್ದರೂ, ಮೇಲಿನ ಆಕರ್ಷಕ ಬರವಣಿಗೆಗಳ ಮೂಲಕ, ಕನ್ನಡಿಗರಲ್ಲಿ - ಅದರಲ್ಲೂ ತರುಣರಲ್ಲಿ ವಿದ್ಯಾರ್ಥಿಗಳಲ್ಲಿ - ಇಂಥ ವಿಷಯಗಳ ಬಗ್ಗೆ ಹೊಸ ಕುತೂಹಲವನ್ನು ಬೆಳೆಸಿದರು; ಮತ್ತು ಆ ಮೂಲಕ, ಕನ್ನಡದಲ್ಲಿ ಮುಂದೆ ಬರಬಹುದಾದ ಸಂಪನ್ನ 'ವಿಶ್ವಕೋಶ' ಕ್ಕೆ ದೊಡ್ಡ ಓದುಗಸಮಾಜವನ್ನು ನಿರ್ಮಿಸಿಕೊಟ್ಟರು. ಒಬ್ಬ ಲೇಖಕನಿಗೆ ಇದಕ್ಕಿಂತ ದೊಡ್ಡ ತೃಪ್ತಿ, ಧನ್ಯತೆ ಇನ್ನೇನು ಬೇಕು?

ಕೃಷ್ಣಾನಂದರು ನಾನು ಹುಟ್ಟಿದ ಮೇಲೆ (೧೯೩೪) ಹುಟ್ಟಿ ನನಗಿಂತ ಮೊದಲೇ (೨೦೦೨) ಹೋಗಿಬಿಟ್ಟರು. ಆಕಾಲದಲ್ಲಿ ಅವರು ಹೋಗಿಬಿಟ್ಟರಲ್ಲ ಅನ್ನುವ ವ್ಯಥೆಯಲ್ಲಿ ಗೆಳೆಯರು ಮಾತಾಡಿಕೊಂಡದ್ದುಂಟು : ಸ್ವದೇಶಕ್ಕೆ ಮರಳಬೇಕು ಎನ್ನುವ ಆದರ್ಶಕ್ಕಾಗಿ ಕಾತರಿಸದೆ, ಅಮೇರಿಕದಲ್ಲೇ ಅವರು ಕೆಲವು ಕಾಲ ನೆಲೆಸಿದ್ದರೆ ಅವರದು ಅಂತರ್‌ರಾಷ್ಟ್ರೀಯ ಹೆಸರಾಗಿ ಕನ್ನಡಕ್ಕೆ ಹೆಮ್ಮೆ ತರಬಹುದಾಗಿತ್ತು ಮತ್ತು ಅವರು ಬೇಕಷ್ಟು ಹಣಗಳಿಸಿ ಊರಲ್ಲಿ ಆಸ್ತಿ ಮಾಡಿ ಬದುಕನ್ನು ಸುಖಸಮೃದ್ಧಿಯಲ್ಲಿ ಕಳೆಯಬಹುದಾಗಿತ್ತು - ಅಂತ. ಅದು ಅವರಿಗೆ ಸುಲಭವಾಗಿತ್ತು, ನಿಜ, ಮತ್ತೆ ಯೋಚಿಸಿದರೆ, ಅಂಥ ಯೋಚನೆಗಳು ಅಪಸವ್ಯ ಯೋಚನೆಗಳು ಎನ್ನುವುದೂ ಹೊಳೆಯುತ್ತದೆ. ಸುಖ ಮತ್ತು ಸಂಪತ್ತು ಎಂಬ ನಮ್ಮ ಇವತ್ತಿನ ಕಲ್ಪನೆಗಳೇ ವಿಕೃತವಾದವು. ಸಂಪತ್ತೆಂದರೆ, ಬೇಕಾದ್ದೆಲ್ಲವನ್ನೂ ಬಾಚಿಕೊಳ್ಳಬಲ್ಲ ಧನಶಕ್ತಿ ಮತ್ತು ಸುಖವೆಂದರೆ, ಬೇಕೆನಿಸಿದ್ದೆಲ್ಲವನ್ನೂ ಪಡೆದು ಭೋಗಿಸುವ ಸುಲಭ ಅವಕಾಶ - ಅಲ್ಲವೆ? ಇದು ಇವತ್ತಿನ ಸಮಾಜಚಪಲದ ಲಹರಿ. ಈ ಲಹರಿಗೆ ತನ್ನನ್ನು ಹೇಗೋ ಹೊಂದಿಸಿಕೊಳ್ಳುತ್ತ ತನ್ನನ್ನು ಮರೆತು ಬಾಳುವುದು ಒಂದು ರೀತಿ; ತನ್ನದೇ ಗಾಢ ಅಂತರಂಗದ ನಿರ್ದೇಶನಕ್ಕೆ ತನ್ನನ್ನು ಆಳವಡಿಸಿಕೊಳ್ಳಲು ಪ್ರಯತ್ನಿಸುತ್ತ ಬಾಳಿಕೊಳ್ಳುವುದು ಇನ್ನೊಂದು ರೀತಿ. ಇಂಥವನನ್ನು ಇಡೀ ಜಗತ್ತಿನ ಯಾವ ಶಕ್ತಿಯೂ ನಿಯಂತ್ರಿಸಲಾರದು, ಬಂಧಿಸಲಾರದು. ಆತ ನಿರ್ಭೀತ, ತನ್ನೊಳಗೇ ತಾನು ಸದಾ ವಿಶ್ರಾಂತ, ಮತ್ತು - ಸಮಾಜ ಚಪಲಗಳೇನೇ ತೋರುತ್ತಿರಲಿ, ನಮ್ಮ ಜನಸಮುದಾಯಗಳು ಕೂಡಾ, ಯಾವತ್ಕಾಲದಿಂದ ಮತ್ತು ಈಗಲೂ, ನಮ್ಮ ಕಲ್ಪನೆಯ ಸುಖಸಂಪತ್ತುಗಳನ್ನು ತ್ಯಜಿಸಿ, ಕೊಂಚ ಅಮೂರ್ತವೆನಿಸುವ ಬೇರೊಂದು ಬಗೆಯ ಸುಖಸಂಪತ್ತುಗಳನ್ನು ಹುಡುಕಿ ಪಡೆದವನೇ 'ದೊಡ್ಡವ' ನೆಂದು ಗಣಿಸಿ ಸ್ಮರಿಸುತ್ತಾರೆ, ಅಲ್ಲವೆ?

ಕೃಷ್ಣಾನಂದರು ಬಾಲ್ಯವನ್ನು ದಾಟಿದ ಮೇಲೆ ಜೀವನ ಪರ್ಯಂತ ಯಾವತ್ತೂ ಯಾರಿಂದಲೂ ಏನನ್ನೂ ಆಪೇಕ್ಷಿಸಿದವರಲ್ಲ. ತನ್ನ ಅಗತ್ಯಕ್ಕೆ ಬೇಕಾದ್ದನ್ನು ತಾನೇ ದುಡಿದುಕೊಂಡರು; ದುಡಿಯುವಾಗಲೂ ಅಗತ್ಯಮಿಕ್ಕು ಒಂದು ಕಿರುನಾಣ್ಯವನ್ನೂ ಗಳಿಸದ ರೀತಿಯಲ್ಲಿ, ಪೈಗೆ ಪೈ ಲೆಕ್ಕವಿಟ್ಟಂತೆ ಗಳಿಸಿ ವ್ಯಯಿಸಿದರು. ಗಳಿಸಿದ್ದರ 'ಸಂವಿಭಾಗ' ವನ್ನು ಪಾತ್ರವರಿತು ದಾನಮಾಡಿದರು - ಕರ್ತವ್ಯವೆಂಬ ನಿಷ್ಠೆಯಿಂದ. ಸಂಸಾರ - ಸಮುದಾಯಗಳಲ್ಲಿ ಸಲೀಸು ಬೆರೆತು 'ಸಂಸಾರವಂದಿಗ' ನಾಗಿಯೇ ಬದುಕಿದರು; ಹಾಗೇ, ಅವೆಲ್ಲವುಗಳಿಂದ 'ತನ್ನನ್ನು' ಪ್ರತ್ಯೇಕವಾಗಿ ಕಾಪಿಟ್ಟುಕೊಂಡರು. ಪುಟ್ಟದೊಂದು 'ಧರ್ಮಶಾಸ್ತ್ರ' ವಾಗಿಕೊಂಡರು.

ಕೃಷ್ಣಾನಂದರ ಸ್ಮರಣೆಯು ನನಗೆ ಪುಣ್ಯ ಸ್ಮರಣೆ.

# ಗುಜರಿ ಗುತ್ತಿಗೆ*

- ವಿ.ಜಿ. ಭಟ್ಟ

ಕೃಷ್ಣಾನಂದಗೆ ಗುಜರೀ ಗುತ್ತಿಗೆ
ಹೊತ್ತು ತರುವ ಹಳೆ ರದ್ದಿ
ಉಳುಕಿದರೂನೂ ಆತನ ಕುತ್ತಿಗೆ
ತಪ್ಪದೆ ಹೊರುವನು ಜಿದ್ದಿ

ಗೋಣಿಯ ಚೀಲದಿ ಮಂದಿ ಬಿಸಾಡಿದ
ಪುರಾಣ ಕಾಲದ ವಸ್ತು
ಮನೆಗೆ ಸೇರಿಸುವ, ಒರಸಿ ಪೇರಿಸುವ
ಹರಕು ಮುರುಕಿಗೂ ಶಿಸ್ತು
ಗಂಡನ ಹುಚ್ಚಿಗೆ ಜ್ಯೋತ್ಸ್ನಾ ಮೆಚ್ಚಿಗೆ

"ತನ್ನಿ ತನ್ನಿ ತಥಾಸ್ತು"

ನೋಡಿಯೆ ನೋಡಿದೆ
ತಿಂಗಳು, ವರುಷಾ
ಕೃಷ್ಣಾನಂದಗೆ ಹರುಷವೊ ಹರುಷ
ಒಂದಿನ ಹಿಂದಿಯರೇನೇ ಕೇಳಿದೆ
"ಕ್ಯಾ ತುಮ ಔರ್ ಕುಛ್ ಕಾಮ್ ನಹಿ?"

ಇಳಿಸಿ ತೋರಿಸಿದ ಭಾರದ ಗಂಟ
ಹರಿದ ತಾಳೆಗರಿ ಕಟ್ಟಿದ ಗ್ರಂಥ
ಕಂಡು ಬೆಚ್ಚಿದೆನು ಮಸಮಸಕಾಗಿಹ
ಮಹಕವಿ ಪಂಪನ ಸಹಿ! ಅದರರಿ
ಮಹಕವಿ ಪಂಪನ ಸಹಿ

* ಡಾ. ಜ್ಯೋತ್ಸ್ನಾ ಕಾಮತರ 'ಸಂಸಾರದಲ್ಲಿ ಸ್ವಾರಸ್ಯ' ಎಂಬ ಲಘು ಹಾಸ್ಯ ಲೇಖನಗಳಲ್ಲಿಯ ಇದೇ ಹೆಸರಿನ ಲೇಖನದಿಂದ ಪ್ರೇರಿತ.

## *My Friend Krishnanand*

*- Dr. V.B. Nadkarni*

Yesterday, on 20th July, 2004, I saw an old Marathi movie "Gopalakrishna" of Prabhat Films – which I had seen in 1940's, about sixty five years ago. I prayed to Lord Krishna to give ability and inspiration to write about my friend whose name is Krishnanand, who possessed a pleasant smile not only on his face but also in his eyes.

I first met Krishnanand or Dr. K.L. Kamat on 14th October, 1959 when I joined the Zoology Department of Karnataka University, Dharwad as a Lecturer in Zoology. "Kamat" as I usually called him (and not by his first name Krishnanand) was already working as a demonstrator in Zoology in Karnataka Science College. The then, Department of Zoology allotted me a room adjacent to Mr. Kamat's room. Both, Kamat and myself being Konkani speaking persons and having some common likings we came nearer to each other as the days passed

Kamat was very keen to carry out research in Zoology but there was one recognized Ph.D. guide in the Karnataka University in Zoolgy. Further, the infant P.G. Zoology Dept. was not well equipped with scientific instruments. One could carry out research based on field studies only. Therefore, I encouraged my friend Kamat to go to some good University

in the United States of America to earn his doctorate degree. He was successful in getting admission as a graduate student to earn the Ph.D. Degree. An assistantship was also awarded to him by the New York State, (Syracuse, N.Y.) University U.S.A., that would meet the day to day expenditure and enable him to pay the fees. My friend Kamat left India for the USA. Both of us believed the wise saying "Apna Hath Jagannath" or "God helps those who help themselves". Kamat studied hard, while working as a teaching / research assistant, and obtained good grades. After completing the theory + Practical courses, he worked on galls on plants.

In 1963, I was fortunate to have been selected as post-doctorate fellow by the Population Council Biomedical Division, New York at Seattle, the University of Washington in 1964. My friend Mr. Kamat was on a tour of Northern states of the USA. At Sweet Home, Oregon State, he stayed with his American hosts who became Life-time friends of Kamat family, Jeanne and Jake Roth. From Oregon, Mr. Kamat came to Seattle and stayed in my house for two days. It was a union of two friends in the USA and we spent our time happily.

Apart from the research work we talked a lot, recollecting our good old days spent together at Dharwad, India. Kamat used to come to my Dharwad house and we enjoyed eating simple homemade food / eatables prepared by my mother. Sometimes Kamat took me to his home town, Honnavar which is about 200 kilometers from Dharwad. In Honnavar, I realized that the Danish, proverb "The road to friend's house is never long" was correct! Kamat was brought

up in a undivided family and as a result called his father, "Kaka" (paternal uncle) and his mother "Kaki" (paternal uncle's wife). So naturally I also called his father "Kaka" and mother "Kaki". Gradually, I became a member of Kamat family. I had access to the kitchen where we enjoyed the eatables prepared by "Kaki". Kamat's mother was telling us the relative advantages / disadvantages of a town life versus city life. They lived in a big house with serveral rooms, the house being surrounded by a garden with coconut, mango, jackfruit and other trees and some flowering plants. She used to say that her daughters being brought up in a big house in a small town Honnavar, she did not want to send any daughter to a big city like Bombay by way of marriage. She would say, such a daughter had to live in a small flat in Bombay (Mumbai) which is nearly equivalent to a wet cat sitting near the (fire) hearth in the kitchen in a big house, as in Honnavar (Bekkina haange ole hattirak koothukollabeku).

Days passed and Kamat earned his doctorate degree and returned to India, with plans to teach Zoology / Entomology and also to carry out research on the diverse class of insects, helpful and also harmful, to fauna, found in India. At first he joined the Agricultural college at Jobner near Jaipur in Rajasthan as a Scientists Pool Officer under the scheme of providing jobs to Indians who have returned to India after successfully completing their higher education in some foreign country. But laboratory facility and other conditions at Jobner College were not satisfactory and after completion of the term he left Jobner for a better job where he could do research and teach. However, he was

unable to get a job suitable to his qualifications and aptitude. After some unsuccessufl trials, he decided to be "self-employed". Being an accomplished photographer, he set up a "Scientific Photography Laboratory" at Bangalore. He provided good service to research workers of the Institute of Science, Bangalore (previously known as Tata Institute) and to other research workers of several colleges / university departments. He did not have outright commercial or just profit making motives. He did not sell photographic material such as film rolls / printing papers etc. Actually, such a photographic trade would have made him a rich person. He came from a successful merchant family. He adhered to "Scientific Photography" taking photographs of graphs, chromatographic, spectroscopic bands, minute insects and histological / cytological slide preparations.

The above mentioned example is very proper to describe that Dr. K.L. Kamat had difficult situation in India on his return to India from U.S.A. Though he was self-employed as a true scientific photographer, he wanted to make good use of his higher education that – which would serve his noble purpose and also provide a regular monthly income. He tried for jobs many a time, but almost everywhere there was a negative response, mainly due to some extra – curricular factors such as the so called "Influence", Reservations and social higher – caste background basis and often, simply knowingly ignoring his merit.

The University where I was teaching, advertised a vacant post – Reader in Zoology, Entomology. I persuaded Dr. Kamat to apply for the post, hoping that he would have a

break in life towards a suitable job. Reluctantly he submitted his application for the post mainly because of my persuasion. I had a long discussion with the Head of the Zoology Dept., Karnataka University, Dharwad and a member of the selection committee. He agreed to do so. I was not confident that Dr. Kamat would be selected. So I had sincerely told the Professor that he may not select Dr. Kamat, if some other candidate is found more suitable for the post by the selection committee. But, it was an unfortuante event. The professor – holder of two doctorates in Zoology, one from an Indian University and the other from a good American University, (though the members of the committee were very fair and sympathetic towards Dr. Kamat), thought that though he fulfilled the terms and conditions of the advertised post, Kamat was not selected on the ground that he did not have "sufficiently long teaching experience". Dr. Kamat felt sad at this type of interview, especially the way the Professor and HOD in Karnataka University Zoology Department. behaved with him. He returned to Bangalore without meeting me. I felt that I made a mistake in persuading him to offer himself as a candidate for the said post and at the "mocking" type of behaviour on the part of my senior colleague the professor and head of the Karnataka University Zoology Department.

After some days I read a letter to the editor of a leading English daily newspaper, published from Bangalore, written by Dr. K.L. Kamat. It was his reaction to the suicide committed by a highly abroad - qualified - scientist in that newspaper earlier. It sharply pointed out that, "It is better to die once for all, rather than dying everyday, bit by bit",

mostly referring to all previous interview "farces" he had to face in our country, India. In this context, I remembered an excellent cartoon published in the leading weekly, the Shankar's Weekly Magazine, some years back about recalling highly qualified Indians from abroad to India. The cartoon showed a high technically qualified engineer seeking a suitable job in India whereas the Government of India authorities concerned with this scheme told him that there was no suitable post for him in India at the time and asking him whether he would accept a stenographer's post, which was vacant in the Home Department of Government of India, in the best interest of serving his mother land following the great idea "Janani Janmabhoomisch swargat api gariyasi" – that the mother and the mother land excels over the heaven. So how about such sincere efforts to lure back specialists in various field to India? It is really unfortunate that Dr. Kamat, a person specialized in Zoology – Entomology, in his own rights, could not get a proper employment to serve his motherland India.

Dr. Kamat did not leave India. He had very attractive opportunities to serve as a forest Entomologist in Canada. He remained in Bangalore "exploring" his true creative abilities of writing articles and books, in Kannada. Mainly on travel, travelogue and life of people of different states in India. The first book was "Naanu Americage Hogidde" which won an achievement award from the Government of Karnataka.

Kamat had a creative mind and a very keen sense of observation. He could see many interesting parts in a bud, a flower, an insect, which normally a casual observer would

miss. He was an eminent photographer, specialized in outdoor photography and more so in microphotography that is very useful in science – research.

As individuals, Kamat and Nadkarni (myself) had some common habits and ways of thinking. He was a jolly peace – loving, rather a reserved person, firmly believing in the noble idea "Jeeyo aur jeene do" or "Live and let live". As a high school student, I learnt from him that he was a volunteer "Sainik" in the Rashtriya Swayamsevak Sanghatana, the RSS at Honnavar. Later he had love for Hindu religion but gradually became a believer in the teaching of Shree Ramakrishna Paramahamsa that all religions are equally good, and one is free to follow the religion by birth or by his personal choice and religious conversion is not necessary, to be a good human being. Further, he also believed in the noble principles of Swami Vivekananda that serving a poor person or a "Daridranarayana" is serving the God Almighty. Tukaram the Marathi Saint, has said in an abhang "one who says that the humble and rustic persons are one's own, is a saint and one has to be aware of the presence of God in such a situation."

My article will be incomplete if I do not mention my experience of Kamat as a commoner, and a householder. I used to go to Bangalore quite often on academic or examination work of the University of Bangalore. Almost, always I stayed at Kamat's house, 110 Shashikiran, 18th Cross, Malleswaram, a three bedroom flat, full of books and photographical materials, almost in every room. He was a wonderful host and prepared delicious fish dishes for me.

Whenever Dr. (Mrs.) Jyotsna Kamat was present in Bangalore, she was / is also an hospitable host. We used to enjoy recollecting our good old days. Once there was a small difference of opinion between Dr. Kamat and Jyotsna Kamat over the word "photographic lab". Dr. Kamat said that "now I will go to the shop. Immediately Jyotsna retorted that he will go to the lab and not the shop. Dr. Kamat defended his term "shop", saying, though it is called a photographic lab since it brought some marginal profit it is a shop. But Jyostna insisted that "lab is lab" where service is given; goods are not sold and a loboratory is not a shop. I was enjoying the conversation (a quarrel) between the two Kamats. When both asked my views, I told as a neutral umpire, or cunning observer that both are right in their own ways.

Dr. Jyotsna was transferred to different places in India by the All India Radio office, sometimes on promotion. So, Dr. Kamat had to bring up their only son Vikas at Bangalore. Krishnanand successfully played the role of mother and father to Vikas in the absence of Dr. (Mrs) Jyotsna. Dr. Kamat was also a jolly and fun-loving person, often quoting proverbs or adages. A common adage was "haalilla battalilla gutuk andu bitta" i.e. there is neither milk nor a glass, (the person) simply swallowed the milk. The other was related to unmarried man, seeing day dreams – "avalagi ashtaputra, magana hesaru Somanatha". In anticipation of one's marriage, one would say that his wife will deliver eight sons and the first son's name will be Somanatha. Some times he said about the monsoon rains in North Kanara coast and people collecting driftwood in the stormy sea "Shettimage

sumne balakondu hotna?" The adage refers to a son of a merchant, trying to grab a log of floating wood in a stormy sea. He tried to grab it, earlier than others, in haste (and haste is waste) and was swept away by a big wave and died.

In this article I will not write about Kamat as an author of twenty - two books. This aspect of his personality is well known to many Kannada authors and readers. Futher I learnt that in his late years he started a website on creative art, tradition and history and culture of India in collaboration with his son Vikas who lives at Birmingham, Alabama, U.S.A. This programme became very successful, particulary in the U.S.A. and has over three million viewers every month. This proves Kamat's creative mind in producing useful visual programmes.

Finally, I like to end my article with a sad memory. We, myself (Baban as Kamat called me) and wife Shanta left Dharwar for Mumbai in Nov, 2001 to stay with our son and since then we are in Mumbai. My two married daughters stay nearby. In April, 2002, I made a telephone call to Shri Umesh Kamat, younger brother of Krishnanand, who stays at Honavar on some personal subject. To my surpise and sorrow, Umesh told me that my friend Krishnanand has suddenly left this world on 20th February, 2002. It was such a shocking event for Dr. (Mrs) Jyotsna, a courageous lady, that she became shattered for some days before getting to her normal courageous behaviour. I felt very sad, mentally upset for some days, after hearing the tragic news.

All the same, I had some satisfaction that my friend Dr. Kamat was not bedridden even for a single day. Such a death comes to only few blessed persons. I was sadder to

realise that Kamat was younger to me by about six years. I remembered the sad words of our first prime minister of India, our loving Nehru chacha when he attended the funeral ceremony of his trusted friend and colleague, Mr. Moulana Abul Kalam Azad. It was reported that Mr. Nehru said he was very tired of seeing his trusted colleagues and friends dying before his eyes, specially the younger ones. He wished that he would like to die and some body else would cremate / bury his body rather than himself witnessing other colleagues die before his eyes. Thus ends the story of my good colleague, a better friend and above all, one of the best peace loving noble person. I want to emphasize here, one important point, Dr. Kamat was a patriot. He did not leave India inspite of his not getting a job. Inspite of a prospect of good job in Canada he lived in India till his last breath.

# FROM INDIA TO OREGON, USA

*- Jeanne Roth*

Forty years have passed since we had the pleasure of inviting Krishna Kamat through the front door of our home and saying, "Welcome, friend." This was six years after our first exchanges of letters between India and America.

The experience of exchanging letters can be the means of forming a deep friendship. Somehow, in writing, we seem to be able to open up our hearts to others. Day-to-day activities, which are so routine, begin to take on importance when one shares them in a letter to someone who is of a different culture.

To meet a pen friend in person is an exciting event when we live thousands of mile apart. There are so many questions before the meeting... what will we eat? How should I prepare his room? how will we entertain him? Will he feel at home in our small rural house? My husband will have to work, so where will I take him in the car to see the countryside? Will he tell me what really is of interest to him?

After visiting our two daughters in Los Angeles, California, Krishna was on a Greyhound bus headed for Albany, Oregon. When he stepped off the bus, with a big

smile and sparkling dark eyes, my apprehension ceased. I knew this would be a pleasant time of hosting our special friend from India. The drive to Sweet Home gave us time to adjust to out different personalities, and the little boys were very quiet. I wondered later if Krishna was a little fearful of riding in a car with a woman driver! I never asked and he never said.

In writing these memories 40 years after his visit, I find that the details are forgotten. All the former questions though just seemed to answer themselves as we visited, ate and checked out the area around our home.

He prepared a delicious Indian meal for us. It wasn't an easy project. In our rural town, there were no special food stores. He told me what ingredients he would need, but we had to do some substituting of spices. The fish was very expensive as we had decided to buy salmon. It turned out to be an expensive meal, but he was a good cook and we enjoyed the meal from start to finish. Well, once he told us that we could use our forks and spoons rather than fingers for eating a chapati. It became a little easier to get the food to our mouths.

We didn't realize at this time how close Krishna was to his last dollar, and he still had a trip of several thousand miles to make back to Syracuse. He never did tell us how he spent that last dollar or even if it was necessary to do so.

A small river flowed at one end of our little farm. While walking from the house to. Krishna liked the river.

## ಬಹುಮುಖ ಪ್ರತಿಭೆಯ

# "ಕೃಷ್ಣಾನಂದರ ಪೂರ್ವಾಶ್ರಮ"

## (ಸಹಪಾಠಿಯೊಬ್ಬರ ಹಿನ್ನೋಟ)

*- ಡಾ. ವಿ.ಕೆ. ದೇಶಪಾಂಡೆ*

"ಕಡಲತೀರದ ಭಾರ್ಗವ" ಡಾ. ಶಿವರಾಮ ಕಾರಂತರಂತೆ, ಕಡಲತೀರದಲ್ಲಿ ಜನಿಸಿ, ಮಲೆನಾಡ ಸೊಬಗಿನಲ್ಲಿ ಶಾಲಾ ಶಿಕ್ಷಣ ಪೂರೈಸಿ - ಸಹ್ಯಾದ್ರಿಯ ಘಟ್ಟಗಳನ್ನೇರಿ ವರಕವಿ ಡಾ. ದ.ರಾ. ಬೇಂದ್ರೆಯವರ ಧಾರವಾಡಕ್ಕೆ, ಕಾಲೇಜು ಶಿಕ್ಷಣ ಪಡೆಯಲು ಬಂದು - ಅಲ್ಲಿನ "ಮಣ್ಣಿನ ವಾಸನೆ", ಸಿಹಿನೀರಿನ ರುಚಿ ಸವಿದು ನಿಸರ್ಗ ವಿಜ್ಞಾನಿಯಾಗಿ ನಂತರ, ತಮ್ಮ ಪ್ರಾಚಾರ್ಯರಾಗಿದ್ದ ಡಾ. ವಿ.ಕೃ. ಗೋಕಾಕರಂತೆ "ಸಮುದ್ರದಾಚೆಯಿಂದ" ಜನಜೀವನ ಅಭ್ಯಸಿಸಿ, ತಮ್ಮ ಜ್ಞಾನಸಂಪತ್ತನ್ನು ಹಂಚಿಕೊಳ್ಳಲು ತಾಯ್ನಾಡಿಗೆ ಮರಳಿ - ವಿ.ವಿ. ಪ್ರಾಧ್ಯಾಪಕ ಸಂಶೋಧಕರಾಗುವ ಬದಲು ವೈವಿಧ್ಯಮಯ ಕನ್ನಡ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ಡಾ. ಕೃಷ್ಣಾನಂದ ಕಾಮತರು - ಆ ಮೂವರು ದಿಗ್ಗಜರ "ಕಲಸುಮೇಲೋಗರ" ವಾಗಿ ಹೊರ ಹೊಮ್ಮಿದ್ದರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಶಿವರಾಮ ಕಾರಂತರು ಮೊದಲು ಸಾಹಿತಿಯಾಗಿ, ನಂತರ ವಿಜ್ಞಾನ ಪ್ರಪಂಚ, ಪರಿಸರ ವಿಜ್ಞಾನಗಳಲ್ಲಿ "ಕೈಯಾಡಿಸಿದ್ದಾರೆ" - ಕೃಷ್ಣಾನಂದ ಕಾಮತರು ಮೊದಲು ನಿಸರ್ಗ ವಿಜ್ಞಾನಿಯಾಗಿ ಶಿಕ್ಷಣ ತರಬೇತಿ ಪಡೆದು, ಆ ನಂತರ ಸಾಹಿತಿಯಾಗಿ ತಮ್ಮ ಜೀವನದುದ್ದಕ್ಕೂ, ಕಾರಂತರ ಹಾಗೆಯೇ "ವಿಶ್ವ ಶಿಕ್ಷಕ" **(Universal teacher)** ರಾಗಿದ್ದು ಅವರೊಬ್ಬ "ಮಿನಿಕಾರಂತ" ರಾಗಿ ರಾರಾಜಿಸಿದರೆಂದರೆ ಅವರ ಜೀವನ ಸಾಧನೆಗಳ ಕಿರು ಪರಿಚಯವಾದೀತು. (ತಮ್ಮ ಬರಹಗಳ ಮೇಲೆ ಕಾರಂತರು, ಪ್ರೊ. ಬಿ.ಜಿ.ಎಲ್. ಸ್ವಾಮಿಯವರ ಪ್ರಭಾವವಿತ್ತು ಎಂದು ಕಾಮತರೇ ಹೇಳಿದ್ದುಂಟು)

ನಾನು ಕೆ.ಎಲ್. ಕಾಮತರನ್ನು ಭೆಟ್ಟಿಯಾದದ್ದು, ೧೯೫೦ರಲ್ಲಿ. ಕರ್ನಾಟಕ ಕಾಲೇಜು ಸೇರಿ ಬಿ.ಎಸ್.ಸಿ. ಪ್ರಾಣಿಶಾಸ್ತ್ರ ಅಭ್ಯಸಿಸಲು ಪ್ರಾರಂಭಿಸಿದಾಗ. ಅವರು

ಅದೇ ವಿಭಾಗದಲ್ಲಿ ಎಂ.ಎಸ್.ಸಿ. ವ್ಯಾಸಂಗ ಮಾಡುತ್ತಿದ್ದರು. ಬೆರಳು ಮೇಲೆಣಿಸುವಷ್ಟು ವಿದ್ಯಾರ್ಥಿಗಳು ಜೀವ ವಿಜ್ಞಾನ ವಿಷಯಗಳನ್ನು ಅಭ್ಯಸಿಸುವ ಆ ವರ್ಷಗಳಲ್ಲಿ - ಹಿರಿಯ, ಕಿರಿಯ ವಿದ್ಯಾರ್ಥಿಗಳು ಜೊತೆಯಾಗಿಯೇ ಕೆಲವು ತರಗತಿಗಳನ್ನು ಕಲಿಯುತ್ತಿದ್ದು, ದಿನವಿಡೀ ಪ್ರಯೋಗಶಾಲೆ, ಗ್ರಂಥಾಲಯ, ಉಪಹಾರ ಗೃಹಗಳಲ್ಲಿಯೇ ಕಾಲ ಕಳೆಯುತ್ತಿದ್ದವು.

ಅಲ್ಲಿಂದ ಮುಂದಿನ ಏಳು ವರ್ಷ ಅಂದರೆ ೧೯೬೪ರ ವರೆಗೆ ನಾನು ಕೆ.ಎಲ್. ಕಾಮತರ ನಿಕಟ ಸಂಪರ್ಕ ಹೊಂದಿದ್ದಲ್ಲದೇ ೧೯೬೩-೧೯೬೪ರಲ್ಲಿ ಅಮೇರಿಕೆಯ ಸಿರ್‍ಯಾಕ್ಯೂಸನಲ್ಲಿ ಅವರ ಜೊತೆಗೇ ವಾಸಿಸಿ, ಅದೇ ಕೀಟಶಾಸ್ತ್ರ ವಿಭಾಗದಲ್ಲಿದ್ದುಕೊಂಡು ಹಗಲಿರುಳೂ, ಅವರನ್ನು ಹತ್ತಿರದಿಂದ ನೋಡಿ, ಅರಿತುಕೊಳ್ಳುವ ಅವಕಾಶ ಹೊಂದಿದ್ದು, ನನ್ನ ಜೀವನದ ಒಂದು ಅಪೂರ್ವ ಅನುಭವವೆನ್ನಬಹುದು. ಈ ಎಲ್ಲ ಸಂದರ್ಭಗಳಲ್ಲಿ, ಅವರ ಅನೇಕ ಹವ್ಯಾಸಗಳು, ಗುಣಗಳು ನನ್ನಲ್ಲಿ (ನನಗೆ ಅರಿವಿಲ್ಲದಂತೆಯೇ) ಅಡಕವಾಗಿ ಹೋದವು. ಅಲ್ಲದೇ - ಮುಂದಿನ ವೃತ್ತಿ-ಜೀವನದಲ್ಲಿ ಕೂಡ, ನನ್ನ - ಅವರ ದೈವ ಘಟನೆಗಳಲ್ಲಿ ಕೂಡ ಸಾಮ್ಯವಿತ್ತು. ಎಂದರೆ ಅವರ ಕಾಲೇಜು ಜೀವನದ ಬಗೆಗೆ, ಅವರಲ್ಲಿಯ ಕ್ರಿಯಾಶೀಲತೆ, ಅವರ ಮಾನಸಿಕ ತುಮುಲ ಬೆಳವಣಿಗೆಗಳ ಬಗೆಗೆ ನನ್ನ ಅನಿಸಿಕೆಗಳನ್ನು ಈ ಲೇಖನದ ಮೂಲಕ, ಓದುಗರೊಂದಿಗೆ ಹಂಚಿಕೊಳ್ಳುವ ಪ್ರಯತ್ನವಿದು. ವಿಜ್ಞಾನಿ ಡಾ. ಕೆ.ಎಲ್. ಕಾಮತರು - ಲೇಖಕ ಡಾ. ಕೃಷ್ಣಾನಂತ ಕಾಮತರಾದ ನಂತರ ಬರೆದ ಅನೇಕ ಪ್ರಬಂಧ ಪತ್ರಗಳು ಗ್ರಂಥ, ಪ್ರವಾಸ ಕಥನಗಳಲ್ಲಿ ತಮ್ಮ ಜೀವನದ ಅನುಭವಗಳಲ್ಲಿ ಎಲ್ಲಿಯೂ ತಮ್ಮ ಕಾಲೇಜು ಜೀವನ (ಧಾರವಾಡದಲ್ಲಿ) ಬಗ್ಗೆ ಬರೆಯಲಿಲ್ಲ. ಅಥವಾ ಅವರ ದೃಷ್ಟಿಯಲ್ಲಿ ಈ ಅವಧಿಯಲ್ಲಿ ಅಂಥ ವೈಶಿಷ್ಟ್ಯಪೂರ್ಣ ಘಟನೆಗಳೇನೂ ನಡೆಯಲಿಲ್ಲ. ಎಲ್ಲರಂತೆ ತಾವೂ ಒಬ್ಬ ಸಾಮಾನ್ಯ ವಿದ್ಯಾರ್ಥಿ "ಉತ್ತರ ಕನ್ನಡದಿಂದ ಘಟ್ಟದ ಮೇಲಿನ ಧಾರವಾಡಕ್ಕೆ ಬಂದ ಸರಳ, ಮಧ್ಯಮ ವರ್ಗದ ಕೆಲಮಟ್ಟಿಗೆ ಮುಗ್ಧ ಯುವಕ" ಎಂದುಕೊಂಡಿರಬಹುದು. ಅವರ ಪ್ರಥಮ ಕೃತಿ "ನಾನೂ ಅಮೇರಿಕೆಗೆ ಹೋಗಿದ್ದೆ". ಇದರಲ್ಲಿ ಅವರ ಆಗಿನ ಮನೋಭಾವ, ಬಾಹ್ಯ ಜೀವನವನ್ನು ನೋಡುವ ದೃಷ್ಟಿ ವ್ಯಕ್ತವಾಗಿವೆ. ವ್ಯಂಗ್ಯ ಮಿಶ್ರಿತ ತಿಳಿಹಾಸ್ಯದ ಅವರ ಶೈಲಿ - ಎಲ್ಲ ತರಹದ ಓದುಗರಿಗೆ ಮೆಚ್ಚಿಗೆಯಾದವು. (೧೯೬೯)

ಆನಂತರ ಅವರು ಬರೆದ ವೈವಿಧ್ಯಮಯ ಲೇಖನ, ಪುಸ್ತಕ ಕಥನಗಳೆಲ್ಲವುಗಳಲ್ಲಿ ಅವರ ಸ್ವಾನುಭವಗಳೇ ಪ್ರತಿಬಿಂಬಿತವಾಗಿದ್ದು ಈ ತರಹದ "ವ್ಯಕ್ತಿತ್ವದ ಬೆಳವಣಿಗೆ" ಹೇಗಾಯಿತು ಎಂಬುದು ಕುತೂಹಲಕಾರಿ ಅಂಶ. ಡಾ. ಕೆ.ಎಲ್. ಕಾಮತರು

ಪ್ರತಿಭಾವಂತ ವಿದ್ಯಾರ್ಥಿಯಾಗಿರದಿದ್ದರೂ - ಕಠಿಣ ಪರಿಶ್ರಮ, ನಿಷ್ಠೆ, ವಿಷಯಗ್ರಹಣ ಸಾಮರ್ಥ್ಯದಿಂದಾಗಿ ತಾವು ವೀಕ್ಷಿಸಿದ ಎಲ್ಲಾ ಸಂಗತಿಗಳನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಲ್ಲದೆ, ಓರ್ವ ಹವ್ಯಾಸಿ ಛಾಯಾಗ್ರಾಹಕನಾಗಿ ಅವೆಲ್ಲವನ್ನೂ ತಮ್ಮ ಕ್ಯಾಮರಾ (ದೃಷ್ಟಿ) ಯಲ್ಲಿ ಸೆರೆ ಹಿಡಿದಿಟ್ಟರು. ವಿದ್ಯಾರ್ಥಿಯಾಗಿದ್ದಾಗ ಈ ತರಹದ ಹವ್ಯಾಸ ಬೆಳೆಸಿಕೊಳ್ಳುವ ಸಂದರ್ಭದಲ್ಲಿ - ಮುಂದೆ ತಾವೊಬ್ಬ ಲೇಖಕನಾಗಬಹುದೆಂಬ ಕಲ್ಪನೆ ಕೂಡ ಅವರ ಮನಸ್ಸಿನಲ್ಲಿ ಸುಳಿದಿರಲಿಕ್ಕಿಲ್ಲ ಎಂದು ನಾನು ಖಚಿತವಾಗಿ ಹೇಳಬಯಸುತ್ತೇನೆ.

ಕರ್ನಾಟಕ ಕಾಲೇಜಿನಲ್ಲಿದ್ದಾಗ, ಅಲ್ಲಿಯ ನೈಸರ್ಗಿಕ ಪರಿಸರ ಅಂದವಾದ ಹೂದೋಟಗಳು, ತುಂಬಿ ತುಳುಕುತ್ತಿದ್ದ ಕಾರಂಜಿ ಕೊಳಗಳು, ವರ್ಣಮಯ ಮೀನು - ಜಲಚರ, ಸಸ್ಯಸಂಪತ್ತು, ಮತ್ಸ್ಯ ಹಾಗೂ ಪ್ರಾಣಿ ಸಂಗ್ರಹಾಲಯ ವಿದ್ಯಾರ್ಥಿಗಳಿಗೆ ಆಕರ್ಷಕವೆನಿಸಿದ್ದವು. ಜೊತೆಗೆ ಡಾ. ಕರಂದೀಕರ, ಡಾ. ನರೋನ್ಹಾ, ಲದ್ವಾ ಡಾ. ಕಶ್ಯಪ, ಎ.ಎಂ. ಪಾಟೀಲರಂಥ ಪ್ರಸಿದ್ಧ ಅಧ್ಯಾಪಕ ವರ್ಗ. ಆಗಿನ ಕಾಲಮಾನದ ಪ್ರಕಾರ "ಅತ್ಯಾಧುನಿಕ" ವೆನಿಸಿದ್ದ ಪ್ರಯೋಗ ಸೌಲಭ್ಯಗಳು ವಿಶಿಷ್ಟವಾಗಿದ್ದವು. ಡಾ. ಕರಂದೀಕರವರ ಮಾರ್ಗದರ್ಶನದಲ್ಲಿ - ಡಾ. ಕಶ್ಯಪ, ಎ.ಎಂ. ಪಾಟೀಲ, ಡಾ. ಉತ್ತಂಗಿಯವರು ಇದೇ ವಿಭಾಗದಲ್ಲಿ ಪಿ.ಎಚ್.ಡಿ. ವ್ಯಾಸಂಗವನ್ನು ಇದೇ ಸಮಯದಲ್ಲಿ ಕೈಕೊಂಡಿದ್ದರಿಂದ ಪ್ರತ್ಯೇಕ ವಾಚನಾಲಯ ಸೌಲಭ್ಯ ಕೂಡ ಉತ್ತಮ ದರ್ಜೆಯದಾಗಿತ್ತಲ್ಲದೇ "ಸೂಕ್ಷ್ಮ ದರ್ಶಕ ಛಾಯಾಗ್ರಹಣ" ಸೌಲಭ್ಯ **Photomicrography** ಕವಾಡ ಅಲ್ಲಿ ಲಭ್ಯವಿತ್ತು. ಇದಕ್ಕೆ ತಕ್ಕಂತೆ - ಕಾಮತರ ಹವ್ಯಾಸಿ ಛಾಯಾಗ್ರಹಣ ಕಲೆಗೆ ಪುಟ ಕೊಟ್ಟಂತೆ. ಅವರ ಸಹಪಾಠಿಗಳಾದ ಆರ್.ಎನ್. ದೇಸಾಯಿ, ಈಶ್ವರ ಮಳಗಿ, ಸಸ್ಯಶಾಸ್ತ್ರ ವಿಭಾಗದ ಡಾ. ಆರ್.ಎಂ. ಪಾಟೀಲರು ಕೂಡ ಛಾಯಾಗ್ರಹಣ ಕಲೆಯಲ್ಲಿ ಆಸಕ್ತರಾಗಿದ್ದರು. ವಿವಿಧ ನಮೂನೆಯ ಕ್ಯಾಮರಾಗಳು, ಫಿಲ್ಟರ್ ಲೆನ್ಸು, ಫಿಲ್ಮಗಳ ಬಗೆಗೆ ಮಾಹಿತಿ ಸಂಗ್ರಹ, ಚರ್ಚೆ, ಬೇರೆ ಬೇರೆ ಸ್ಥಳಗಳಲ್ಲಿ ಛಾಯಾಗ್ರಹಣ ಅಭ್ಯಾಸ, ಆಗಿನಿಂದಲೇ ಪ್ರಾರಂಭವಾಗಿತ್ತು.

ನಮ್ಮ ಅಭ್ಯಾಸಕ್ರಮಗಳ ಅಂಗವಾಗಿ ಪ್ರತಿವಾರಾಂತ್ಯದಲ್ಲಿ ಧಾರವಾಡ ಸಮೀಪದ ಸೋಮೇಶ್ವರ, ನುಗ್ಗಿಕೇರಿ, ಅತ್ತಿಕೊಳ್ಳ, ಕೆಲಗೇರಿ, ನೀರಸಾಗರ, ಕಣವಿ ಹೊನ್ನಾಪುರ ಹಳ್ಳಿಗಳ ವನ, ಜಲಚರಗಳ ಅಭ್ಯಾಸ, ಕೀಟ ಪತಂಗಗಳನ್ನು ಹಿಡಿದು ಅವನ್ನು ಪ್ರಯೋಗಾತ್ಮಕವಾಗಿ ಸಂಗ್ರಹಿಸುವದು ನಡೆದಿತ್ತು. ಅಲ್ಲದೇ ವರ್ಷದಲ್ಲಿ ೨-೩ ಸಲ ದಾಂಡೇಲಿ, ಅನಮೋಡ, ಯಲ್ಲಾಪೂರ, ಜೋಗ ಬಳಿಯ ಪಶ್ಚಿಮ ಘಟ್ಟದ ಅರಣ್ಯಗಳು, ದೂರದ ರಾಮೇಶ್ವರಂ (ಕ್ರುಸಾಡಿ ದ್ವೀಪಗಳು) ಕಾರವಾರ ಕಡಲು

ತೀರ ಉದಕ ಮಂಡಲ, ಕೆಮ್ಮಣ್ಣುಗುಂಡಿ ಗಿರಿಧಾಮಗಳನ್ನು ನಾವು ಸುತ್ತಾಡಿದೆವು. ಈ ಎಲ್ಲ ಪ್ರವಾಸಗಳಲ್ಲಿ ಕಾಮತರ ಸೂಕ್ಷ್ಮದರ್ಶಿ ಮನಸ್ಸು, ನಿಸರ್ಗ ಅಭ್ಯಾಸದ ಜೊತೆಯಲ್ಲಿಯ ಜನಜೀವನ, ಇತಿಹಾಸ, ಪ್ರಾಚೀನ ಸಂಸ್ಕೃತಿಗಳನ್ನು ಕೂಡ ಮೆಲಕು ಹಾಕುತ್ತಿದ್ದಿರಬೇಕು.

೧೯೫೪ರಲ್ಲಿ ಎಂ.ಎಸ್.ಸಿ., ಮುಗಿಸಿದ ಕಾಮತರು - ಮುಂದೆ ಎರಡು ವರ್ಷ ಅಲ್ಲಿಯ ಕರ್ನಾಟಕ ಕಾಲೇಜಿನಲ್ಲಿ ಪ್ರಯೋಗಶಿಕ್ಷಕರಾಗಿ **(demonstrator)** ತಮ್ಮ ವೃತ್ತಿ ಜೀವನದ ಮೊದಲ ಹೆಜ್ಜೆ ಇಟ್ಟರು. ಸ್ವಭಾವತಃ ಸಹಾಯಕಾರಿ, ಪರೋಪಕಾರಿಯಾಗಿದ್ದ ಕಾಮತರನ್ನು ನಮ್ಮಂಥ ಕಿರಿಯ ಸಹಪಾಠಿಗಳು ಸದಾಕಾಲ ಅರಸಿಕೊಂಡು ಹೋಗಿ ಅವರಿಂದ ಕುಶಲಶಸ್ತ್ರಪ್ರಯೋಗ ಕ್ರಮಗಳು, ಚಿತ್ರ ಬಿಡಿಸುವ ಕಲೆ, ಅಭ್ಯಾಸ ಕ್ರಮಗಳನ್ನು ಕಲಿತುಕೊಂಡೆವು. ಹೀಗೆ ಶಿಕ್ಷಕ ವೃತ್ತಿಯಲ್ಲಿ ಅವರ ಆಸಕ್ತಿ ಆಗಲೇ ಮೂಡಿತ್ತು. ಇದೇ ಸಮಯದಲ್ಲಿ ಕರ್ನಾಟಕ ಕಾಲೇಜು ಸರಕಾರದಿಂದ ಹಸ್ತಾಂತರವಾಗಿ ಕರ್ನಾಟಕ ವಿಶ್ವವಿದ್ಯಾಲಯದ ಅಂಗ ಸಂಸ್ಥೆಯಾಗಿ ಮಾರ್ಪಾಡಾದಾಗ ಅನೇಕ ಹಿರಿಯ ಪ್ರಧ್ಯಾಪಕರು ವರ್ಗಾವಣೆಯಾಗಿ ಹೋದರು. ಡಾ. ಕರಂದೀಕರ ನಿವೃತ್ತರಾದದ್ದರಿಂದ ಪಿ.ಹೆಚ್.ಡಿ., ಮಾರ್ಗದರ್ಶನ ಸೌಲಭ್ಯ ತಪ್ಪಿತು. ಸ್ನಾತಕೋತ್ತರ ವಿಭಾಗಕ್ಕೆ ಪ್ರತ್ಯೇಕ ಪ್ರವಾಚಕರು, ಉಪನ್ಯಾಸಕರು ನಿಯುಕ್ತರಾದರು, ಭವಿಷ್ಯದ ಅವಕಾಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ಅಧ್ಯಾಪಕರು ಪಿ.ಹೆಚ್.ಡಿ., ವ್ಯಾಸಂಗಕ್ಕಾಗಿ ವಿದೇಶಗಳಿಗೆ ತೆರಳುವ ಸಂದರ್ಭ ಒದಗಿತು.

ಆದೇ ಕಾರಣಕ್ಕಾಗಿ ಕಾಮತರೂ ಪ್ರಯತ್ನಿಸಿ, ಪಿ.ಹೆಚ್.ಡಿ., ಸಂಪಾದಿಸಲು ಸಿರಾಕ್ಯೂಸಿಗೆ ತೆರಳಿದರು. (೧೯೬೧). (ಅಧ್ಯಾಪಕ ವೃತ್ತಿಯಲ್ಲಿ ಇಲ್ಲಿಯೇ ಮುಂದುವರೆದಿದ್ದರೆ ಬಹುಶ "ಕೃಷ್ಣಾನಂದ" ರ ಅವತಾರವಾಗುತ್ತಿರಲಿಲ್ಲವೇನೋ?). ಸಂಪ್ರದಾಯಸ್ಥ, ಸಂಯುಕ್ತ ಕುಟುಂಬದ ಈ "ಕಾರವಾರಿ, ಕೊಂಕಣಿ ಬ್ರಾಹ್ಮಣ" ನಿಗೆ - ಅತ್ಯಂತ ಮುಂದುವರೆದ ಅಮೇರಿಕನ್ ಮುಕ್ತ ಸಮಾಜ ಪದ್ಧತಿ, ಕಣ್ಣು ಕೊರೈಸುವ ಸಿರಿ ಸಂಪತ್ತು, ವಿಲಾಸಿ ಜೀವನ - ಸಾಂಸ್ಕೃತಿಕ ಆಘಾತವುಂಟು ಮಾಡಿದ್ದು ಅವರ ಲೇಖನಗಳಲ್ಲಿ ವ್ಯಕ್ತವಾಗಿದೆ. ಕೇವಲ ೬೦-೭೦ ಭಾರತೀಯ ಮೂಲದ ನಿವಾಸಿಗಳಿದ್ದ ಚಿಕ್ಕನಗರ ಸಿರಾಕ್ಯೂಸದಲ್ಲಿ ಅವರಿಗೆ ಎರಡು ವರ್ಷ ಕಾಲ (ನಾನು ಹೋದದ್ದು ೧೯೬೩ರಲ್ಲಿ) ಕನ್ನಡಿಗರೊಬ್ಬರೂ ಸಿಕ್ಕಿರಲಿಲ್ಲ - ನನ್ನ ಕೂಡ ಕನ್ನಡದಲ್ಲಿ ಸಂಭಾಷಿಸಲೂ ತಡವರಿಸಿದ್ದು ನನಗೆ ನೆನಪಿದೆ. ಇಂಥ ವಾತಾವರಣದಲ್ಲಿ ಒಂಟಿತನ, ಬೇಸರ ಕಳೆಯಲು ತಮ್ಮ ಮಿತ್ರರು, ಸಂಬಂಧಿಗಳಿಗೆ ಸುದೀರ್ಘ ಪತ್ರ ಬರೆಯಲು ಪ್ರಾರಂಭಿಸಿದರು. ಅಲ್ಲಿನ ಅನುಭವಗಳನ್ನು ಸ್ವಾರಸ್ಯಕರವಾಗಿ ವರ್ಣಿಸುತ್ತ ಅವರ

ಲೇಖನಕಲೆ ಚುರುಕುಗೊಂಡಿತು. ಮತ್ತೊಮ್ಮೆ ಓದಿ ಆನಂದಿಸಲು ಬರುವಂತೆ ಅವುಗಳ ಕಾರ್ಬನ್ ಪ್ರತಿಗಳನ್ನು ಕೂಡ ಅವರು ಕಾಯ್ದಿರಿಸಿದ್ದರು. ಅಮೇರಿಕೆಯ ಹವಾಮಾನ ವೈಪರೀತ್ಯಗಳು, ಋತು ಬದಲಾವಣೆ. ಚಳಿಗಾಲ ಪ್ರಾರಂಭವಾಗುವ ಮುನ್ನ ಎಲೆಗಳ ಮರಗಳ ವರ್ಣಬದಲಾವಣೆ, ಹಿಮಪಾತ ಅದಕ್ಕೆ ತಕ್ಕಂತೆ ಅಲ್ಲಿನ ಜನರ ಜೀವನಕ್ರಮ ಹೀಗೆ ಜೀವನದ ಹತ್ತಾರು ವೈಚಿತ್ರ್ಯಗಳನ್ನು ನೋಡಿ ಅವೆಲ್ಲವನ್ನೂ ಛಾಯಾಗ್ರಹಣ ಮಾಡಿಟ್ಟರು. ವರ್ಣಚಿತ್ರಗಳ ಯುಗ ಅದೇ ಆಗ ಪ್ರಾರಂಭವಾಗಿದ್ದು. ವರ್ಣಪಾರದರ್ಶಿಕೆಗಳಲ್ಲೂ, ಅವರು ತಮ್ಮ ಪ್ರತ್ಯಕ್ಷದರ್ಶಿ ಅನುಭವಗಳನ್ನು ಸಂಗ್ರಹಿಸಿದರು. ವಾರಾಂತ್ಯದಲ್ಲಿ ನಡೆಯುತ್ತಿದ್ದ ಫುಟ್ಬಾಲ ಪಂದ್ಯಗಳು, ಹಿಮಪಾತದ ದಿನಗಳಲ್ಲಿ ಸ್ಕೇಟಿಂಗ್, ವಿವಿಧ ಮನರಂಜನೆಯ ಕಾರ್ಯಕ್ರಮಗಳು, ನೃತ್ಯ ಸಂಗೀತ, ಚಲನಚಿತ್ರಗಳ ಆಕರ್ಷಣೆ ಸಾಕಷ್ಟಿದ್ದರೂ - ಇತರ ಅನೇಕ ಭಾರತೀಯ ವಿದ್ಯಾರ್ಥಿಗಳಂತೆ ಯಾವುದೇ ಚಟ, ಆಮಿಷಗಳಿಗೆ ಕಾಮತರು ಬಲಿಯಾಗದಿದ್ದುದು ಆಶ್ಚರ್ಯಕರ. ಅವರ ಮಾತಿನಲ್ಲಿ - ಅಮೇರಿಕನ್ ಧಾಟಿ (**accent**) ಕೂಡ ಇರಲಿಲ್ಲ. ನಾನು ಅಲ್ಲಿ ಹೋದಾಗ ಅವರ ಜೊತೆ ವಿಮಾನ ನಿಲ್ದಾಣಕ್ಕೆ ನನ್ನನ್ನು ಕರೆಯಲು ಬಂದ ಅವರ ಮಿತ್ರ ಜಿಮ್ ಡೇವಿಸ್ "ನೀನು ಸಿಗರೇಟು ಸೇದುವದಿಲ್ಲವೇ, ಸಾರಾಯಿ ಕುಡಿಯುವದಿಲ್ಲವೇ? ನೃತ್ಯ ಮಾಡುವದಿಲ್ಲವೇ? ಹುಡುಗಿಯರ ಜೊತೆ **dating** ಮಾಡುವಿಯಾ?" ಎಂಬೆಲ್ಲ ಪ್ರಶ್ನೆ ಕೇಳಿದ್ದಕ್ಕೆ ನಾನು "ಇಲ್ಲ" ವೆಂದು ಉತ್ತರಿಸಿದಾಗ - "ಹಾಗಾದರೆ ನೀನಿಲ್ಲಿ ಬಂದದ್ದೇಕೆ?" ಎಂದು ಕೇಳಿ - "ಕ್ರಿಸ್ (ಕಾಮತ) ಕೂಡ ಹೀಗೆಯೇ ಇರುವನಲ್ಲ" ಎಂದು ಆಶ್ಚರ್ಯ ವ್ಯಕ್ತಪಡಿಸಿದ. ನಾವು ಇನ್ನಿಬ್ಬರು ಪಾಕಿಸ್ತಾನಿ ವಿದ್ಯಾರ್ಥಿಗಳ ಜೊತೆ ಒಂದೇ ಮನೆಯಲ್ಲಿ ವಾಸವಾಗಿದ್ದು ಕೂಡ ಅವರಿಗೆ ಆಶ್ಚರ್ಯಕರವೆನಿಸಿತ್ತು. "ನೀವು ವೈರಿಗಳಲ್ಲವೇ - ಅದ್ಹೇಗೆ ಕೂಡಿರುವಿರಿ?" ಎಂಬುದೇ ಅವರ ಪ್ರಶ್ನೆ, ಕುತೂಹಲ.

ಕಾಮತರು ಪಿ.ಹೆಚ್.ಡಿ. ವ್ಯಾಸಂಗವನ್ನು ಎರಡು-ಮೂರು ವರ್ಷಗಳಲ್ಲಿ ಪೂರೈಸುವ ಛಲದಿಂದ ಸಾಕಷ್ಟು ಪರಿಶ್ರಮ ವಹಿಸುತ್ತಿದ್ದರು. ಸುಮಾರು ಐದು-ಆರು ಮೈಲು ದೂರದ ವಿವಿಧ "ಅರಣ್ಯ ಸಂಶೋಧನ ಕೇಂದ್ರ" ಕ್ಕೆ ನಡೆದುಕೊಂಡೇ ಹೋಗಿ ಬರುತ್ತಿದ್ದರು - ದಿನಸಿ ಸಾಮಾನು ತರಲು **downtown** ಅಂದರೆ ಮಾರ್ಕೆಟಿಗೆ ಕೂಡ, ಎರಡು ಮೈಲು (ನಾಲ್ಕು-ಐದು ಕಿ.ಮೀ.) ನಡೆದೇ ಹೋಗುತ್ತಿದ್ದೆವು. (ಇತರ ಅಮೇರಿಕನ್ ವಿದ್ಯಾರ್ಥಿಗಳಂತೆ ಕಾರು ಕೊಂಡಿರಲಿಲ್ಲ.) ಮುಂಜಾನೆ ಎಂಟರಿಂದ ಸಂಜೆ ಐದು ಹಾಗೂ ಮತ್ತೆ ಏಳುಮುವತ್ತರಿಂದ ಮಧ್ಯರಾತ್ರಿಯವರೆಗೂ ಕೀಟಶಾಸ್ತ್ರ ವಿಭಾಗದಲ್ಲಿ ತಮ್ಮ ಕೋಣೆ, ಗ್ರಂಥಾಲಯ, ಪ್ರಯೋಗಶಾಲೆಯಲ್ಲಿಯೇ ಇರುತ್ತಿದ್ದರು.

ಅವರ ಇತರ ಆಸಕ್ತಿಗಳೆಂದರೆ - **National Geographic** ಮಾಸಪತ್ರಿಕೆ (ಹಳೆ-ಹೊಸ) ಗಳು, ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ, ಹಿಂದಿ ಚಿತ್ರ ಗೀತೆಗಳ ರೆಕಾರ್ಡ್ಸ್, ಟೇಪುಗಳನ್ನು ಕೇಳುವುದು, ರುಚಿಯಾದ ತಿಂಡಿ ತಿನಿಸು, ಅಡುಗೆ ಮಾಡುವದು, ಕೆಲವೇ ಸ್ನೇಹಿತರ ಜೊತೆ ಕಿರುಹರಟೆ, ಲಘುಹಾಸ್ಯ. ಸಮೀಪದ ಊರುಗಳಲ್ಲಿ ನಮ್ಮ ಪರಿಚಯಸ್ಥರಿದ್ದರೂ ಕೂಡ - ಅವರನ್ನು ಭೇಟ್ಟಿಯಗುವದಾಗಲಿ ಆದ, ಫೋನ್ ಮಾಡುವದಾಗಲಿ ಕ್ವಚಿತ್ ಆಗಿತ್ತು. **Electron microscopy and Photo micrography** ಎಂಬ ಕಿರು ಪರಿಚಯಾತ್ಮಕ ಕೋರ್ಸ್ ಒಂದನ್ನು ನಾವಿಬ್ಬರೂ ಸೇರಿ ಅಭ್ಯಸಿಸಿದಾಗ, ಛಾಯಾಗ್ರಹಣ ಕಲೆಯು ಹೆಚ್ಚಿನ ಪರಿಚಯವುಂಟಾಯಿತು. ಬಹುಶಃ ಇದೇ ಅವರು ಮುಂದೆ "ವೈಜ್ಞಾನಿಕ - ಛಾಯಾಗ್ರಹಣ ಪ್ರಯೋಗಾಲಯ" ಸ್ಥಾಪಿಸಲು ಪ್ರೇರಣೆ - ಪೂರ್ವಭಾವೀ ಸೂಚನೆಯಾಗಿರಬಹುದು.

೧೯೬೫ರಲ್ಲಿ ಪಿ.ಹೆಚ್.ಡಿ. ಮುಗಿಸಿ, "ಮಣ್ಣಿಗೆ ಮರಳಿದ" ಕಾಮತರಿಗೆ ಅವರ ಮಹದಾಸೆಯಾಗಿದ್ದ, ವಿಶ್ವವಿದ್ಯಾಲಯದ ಪ್ರವಾಚಕ ಹುದ್ದೆ ದೊರೆಯದಿದ್ದುದು - ವಿಧಿಯ ಕ್ರೂರ ಅಟ್ಟಹಾಸವೆಂದೇ ಹೇಳಬೇಕು. ಅವರ ಜೊತೆ ಹಾಗೂ ಅವರ ನಂತರ ಎಂ.ಎಸ್.ಸಿ., ಪಿ.ಹೆಚ್.ಡಿ., ಮಾಡಿ ಹಿರಿ-ಕಿರಿಯ ಸಹೋದ್ಯೋಗಿಗಳೆಲ್ಲ ಹೆಚ್ಚಾಗಿ ಕಾಲೇಜು - ವಿಶ್ವವಿದ್ಯಾಲಯಗಳಲ್ಲಿ ಪ್ರಾಣಿಶಾಸ್ತ್ರದ ಅಧ್ಯಾಪಕರಾಗಿದ್ದರೆ - ಕಾಮತರೊಬ್ಬರೇ ಅವಕಾಶಗಳನ್ನು ಅರಸುತ್ತ, ಕೊನೆಗೆ ಸ್ವತಂತ್ರವಾಗಿ ವೃತ್ತಿಜೀವನ ಬದಲಾಯಿಸಿ, ಸಾಹಿತಿಯಾದರು. (ಅಮೇರಿಕೆಯಲ್ಲಿಇರಬಯಸಿದ್ದರೆ, ಅವರ ಇಚ್ಛೆ ಪೂರೈಸಬಹುದಿತ್ತು.) ಆದರೆ ವಿದ್ಯಾರ್ಥಿ ಜೀವನದಲ್ಲಿ ತಾವು ಕಲಿತ ವಿದ್ಯೆ, ಬೆಳಸಿಕೊಂಡ ಹವ್ಯಾಸಗಳು, ತಾವು ವೀಕ್ಷಿಸಿದ, ಚಿತ್ರೀಕರಿಸಿದ, ನೆನಹುಗಳು ಬರೆದ ಪತ್ರಗಳನ್ನು - ಸದುಪಯೋಗಪಡೆಸಿ, ವಿಶ್ವ ಸಮುದಾಯದೊಂದಿಗೆ, ಪತ್ರಿಕಾ, ಮುದ್ರಣ, ಸಮೂಹ ಮಾಧ್ಯಮಗಳ ಮೂಲಕ, ಹಂಚಿಕೊಂಡರು. ಇತಿಹಾಸಜ್ಞೆ, ಆಕಾಶವಾಣಿ ಅಧಿಕಾರಿಯಾಗಿದ್ದ ಪತ್ನಿ ಜ್ಯೋತ್ಸ್ನಾ, ಕಂಪ್ಯೂಟರ ಪರಿಣಿತರಾದ ಮಗ ವಿಕಾಸ - ಸೊಸೆ ಹಾಗೂ ಅವರ ಪರಿವಾರದ ಸದಸ್ಯರು - ಅವರ ಪರಿಶ್ರಮ ವ್ಯರ್ಥವಾಗದಂತೆ ಅವರ ಎಲ್ಲ ಸಾಹಿತ್ಯ, ಛಾಯಾಚಿತ್ರ - ಪತ್ರ ಸಂಗ್ರಹಗಳನ್ನು ಆಧುನಿಕ - ಇಂಟರನೆಟ್ ಮಾಧ್ಯಮದ ಮೂಲಕ, ಸ್ಮಾರಕ ವಾಚನಾಲಯದ ಮೂಲಕ ೨೧ನೇ ಶತಮಾನದ ಭಾವೀ ಪೀಳಿಗೆಗಳ ಅವಗಾಹನೆಗೆ ಕಾಯ್ದಿರಿಸಿದ್ದು - ಬಹು ಮೂಲ್ಯ ಸಂಗತಿ. ನಮ್ಮ ಪೂರ್ವಜರು ಶಿಲ್ಪಕಲೆಗಳಲ್ಲಿ ತಮ್ಮ ನೆನಹುಗಳನ್ನು ಬಿಟ್ಟು ಹೋಗಿದ್ದರೆ - ಕಾಮತರು ಅವನ್ನು ಛಾಯಾಚಿತ್ರ, ಬರಹಗಳಲ್ಲಿ ಸಂಗ್ರಹಿಸಿದ್ದಾರೆ.

# “ಕಾಮತರು ನಾನು ಕಂಡಂತೆ”

*- ಹೂಗೊಪ್ಪಲು ಕೃಷ್ಣಮೂರ್ತಿ*

**ಆ**ನೆಯು ಹೇಗಿದೆಯೆಂದು ಹಲವು ಕುರುಡರು ಬಣ್ಣಿಸುವ ಕಥೆ ಎಲ್ಲರಿಗೂ ಪರಿಚಿತ. ಕಾಮತರ ವ್ಯಕ್ತಿತ್ವವನ್ನು ಬಣ್ಣಿಸುವುದೂ ಕುರುಡರು ಆನೆಯನ್ನು ಬಣ್ಣಿಸಿದಂತೆಯೇ ಸರಿ. ಅವರ ಬಹುಮುಖ ವ್ಯಕ್ತಿತ್ವ, ಒಬ್ಬೊಬ್ಬರಿಗೆ ಒಂದೊಂದು ರೀತಿ, ಅವರವರ ದೃಷ್ಟಿಗೆ ತಕ್ಕಂತೆ ಗೋಚರಿಸುತ್ತದೆ. ವಿಜ್ಞಾನಿ, ಪರಿಸರ ತಜ್ಞ, ಛಾಯಾಗ್ರಾಹಕ, ಇತಿಹಾಸಕಾರ, ಕಲಾವಿದ, ಸಮಾಜ ಶಾಸ್ತ್ರಜ್ಞ, ಬರಹಗಾರ - ಹೀಗೆ ಹಲವು ಬಗೆಯ ವ್ಯಕ್ತಿತ್ವ, ನಮ್ಮೆದುರಿಗೆ ನಿಲ್ಲುತ್ತದೆ. ನಾನು ಕಾಮತರನ್ನು ಮೊದಲು ಭೇಟಿಯಾದದ್ದು ಮೈಸೂರಿನಲ್ಲಿ 1983ರಲ್ಲಿ. ಡಾ. ಜ್ಯೋತ್ಸ್ನಾ ಕಾಮತ್ ಮೈಸೂರು ಆಕಾಶವಾಣಿಯ ನಿರ್ದೇಶಕರಾಗಿ ಅಧಿಕಾರವಹಿಸಿಕೊಂಡ ಕೆಲವು ತಿಂಗಳುಗಳಲ್ಲಿ ಕಾರ್ಯಕ್ರಮ ನಿರ್ವಾಹಕನಾಗಿದ್ದ ನಾನು ಅವರ ಮನೆಗೆ ಹೋಗಿದ್ದಾಗ, ಬನಿಯನ್ ತೊಟ್ಟು ನಿಕ್ಕರ್‌ಧಾರಿ ವ್ಯಕ್ತಿಯನ್ನು ಡಾ. ಕೃಷ್ಣಾನಂದ ಕಾಮತ್ ಎಂದು ಡಾ. ಜ್ಯೋತ್ಸ್ನಾ ಪರಿಚಯಿಸಿದಾಗ, ವಿದೇಶದಲ್ಲಿ ವಿಜ್ಞಾನದಲ್ಲಿ ಡಾಕ್ಟರೇಟ್ ಪಡೆದ ವ್ಯಕ್ತಿ ಇವರೇ ಎಂದು ಆಶ್ಚರ್ಯವಾಗದೇ ಇರಲಿಲ್ಲ! ಕೃಷ್ಣಾನಂದ ಕಾಮತರು ಡಾ. ಜ್ಯೋತ್ಸ್ನಾ ಅವರನ್ನು ನನ್ನೊಂದಿಗೆ ಮಾತನಾಡಲು ಬಿಟ್ಟು ಬಂದ ಅತಿಥಿಗೆ ಚಹಾ ಮಾಡಲು ಅಡುಗೆ ಮನೆ ಸೇರಿ ಬಿಟ್ಟರು! ಕಾಮತರ ಈ ನಡವಳಿಕೆ ವಿಚಿತ್ರ ಎನಿಸಿದರೂ ಅವರ ಸಂಪರ್ಕ ಹೆಚ್ಚಾದಂತೆ ಉದ್ಯೋಗಿ ಪತ್ನಿಯ ಪತಿ ಅವಳ ಕಾರ್ಯನಿರ್ವಹಣೆಗೆ ಹೇಗೆ ಒತ್ತಾಸೆಯಾಗಿ ನಿಲ್ಲಬಹುದೆನ್ನುವುದನ್ನು ಅವರ ನಡವಳಿಕೆ ನಿರೂಪಿಸಿತು. ಹೆಂಡತಿ ಅಧಿಕಾರಿಯಾಗರಲಿ, ಅಪ್ಪಟ ಗೃಹಿಣಿಯಾಗಿರಲಿ, ಅಡುಗೆ ಮನೆಯ ಜವಾಬ್ದಾರಿ ಹೆಂಡತಿಯದೇಯೆಂದು ತಿಳಿದಿರುವ ಸಮಾಜದಲ್ಲಿ, ಕಾಮತರು ತಮ್ಮ ಪತ್ನಿಗೆ ನೀಡಿದ್ದ ಸಮಾನತೆ, ಅವರ ಪ್ರಗತಿಶೀಲವ್ಯಕ್ತಿತ್ವದ್ಯೋತಕವಾಗಿತ್ತು. ನಮ್ಮಲ್ಲಿ ಎಷ್ಟು ಜನ ಗಂಡಸರು, ಹೆಂಡತಿಯ ಪರಿಚಿತರೋ, ನೆಂಟರೋ ಬಂದರೆ ಆಕೆಯನ್ನು ಅವರೊಂದಿಗೆ ಮಾತಿಗೆ ಬಿಟ್ಟು ಅಡುಗೆ ಮನೆಗೆ ಹೋಗಿ ಚಹಾ ತಯಾರಿಸಿ ಕೊಡುತ್ತೇವೆ?

ಮೈಸೂರು ಆಕಾಶವಾಣಿಗೆ, ಕೊಕ್ಕರೆ ಬೆಳ್ಳೂರು ಮತ್ತು ರಂಗನತಿಟ್ಟಿನ ವಲಸೆ ಹಕ್ಕಿಗಳ ಮೇಲೆ, ಬಾನುಲಿ ನುಡಿಚಿತ್ರ ತಯಾರಿಸಲು ಹೋಗುವಾಗ ಕಾಮತರೂ ನಮ್ಮ ಜೊತೆಗೆ ಬಂದಿದ್ದರು. ಅಲ್ಲಿ ಅವರ ವ್ಯಕ್ತಿತ್ವ ನಿಧಾನವಾಗಿ ಅನಾವರಣಗೊಳ್ಳುತ್ತಾ ಹೋಯಿತು. ಕೊಕ್ಕರೆ ಬೆಳ್ಳೂರಿನಲ್ಲಿ ನಾನು ಹಕ್ಕಿಗಳ ಕಲರವಗಳ ಜೊತೆಗೆ ಊರಿನ ಜನಗಳ ಸಂದರ್ಶಗಳನ್ನು ಧ್ವನಿಮುದ್ರಿಸಿಕೊಳ್ಳುತ್ತಿದ್ದೆ. ಕಾಮತರು ಮರದಿಂದ ಮರಕ್ಕೆ ದಾಪುಗಾಲು ಹಾಕುತ್ತಾ ಹಕ್ಕಿಗಳನ್ನು ಕ್ಯಾಮರಾದಲ್ಲಿ ಸೆರೆಹಿಡಿಯುತ್ತಾ ನಡೆಯುತ್ತಿದ್ದರೆ, ಅವರ ಹಿಂದೆ ಹಳ್ಳಿ ಮಕ್ಕಳ ಗುಂಪೊಂದು ಓಡುತ್ತಿತ್ತು. ಕಾಮತರು ಮಕ್ಕಳೊಂದಿಗೆ ಸ್ನೇಹ ಬೆಳೆಸಿ, ಅವರೊಂದಿಗೆ ತಮಾಷೆ ಮಾಡುತ್ತಲೇ ತಮ್ಮ ಕೆಲಸದಲ್ಲಿ ತೊಡಗಿದ್ದರು. ಬೆಳಿಗ್ಗೆ ಹತ್ತು ಗಂಟೆಯಿಂದ ಸಂಜೆ 5 ರವರೆಗೆ ಅವರ ಕೆಲಸ ನಡೆಯುತ್ತಲೇ ಇತ್ತು. ಛಾಯಾಚಿತ್ರ ಕ್ಲಿಕ್ಕಿಸುವುದರ ಜೊತೆಗೆ ಹಳ್ಳಿಯುವರ ಅದರಲ್ಲೂ ವೃದ್ಧರ ಛಾಯಾಗ್ರಹಣವೂ ನಡೆದಿತ್ತು. ಕಾಮತರೂ ಪಕ್ಷಿಶಾಸ್ತ್ರಜ್ಞರಾಗಿದ್ದರಿಂದ ಅವರಿಂದ ಕೆಲವು ಮಾಹಿತಿ ಪಡೆಯಲು ಅವರನ್ನು ಪ್ರಶ್ನಿಸಿದಾಗ, ಅವರ ಜ್ಞಾನದ ಆಳದ ಅರಿವು ನನಗಾಯಿತು. ಹಕ್ಕಿಗಳ ವಲಸೆಯ ಬಗ್ಗೆ ಸಮಗ್ರ ಮಾಹಿತಿಯನ್ನು ಕಾಮತರು ಓತಪ್ರೋತವಾಗಿ ನೀಡುತ್ತಾ ಹೋದರು. ಕಾಡು ಇಲ್ಲದಿದ್ದರೂ ಪ್ರತಿ ವರ್ಷವೂ ಪಕ್ಷಿಗಳು ಬೆಳ್ಳೂರನ್ನು ಹುಡುಕಿಕೊಂಡು ಏಕೆ ಬರುತ್ತವೆ? ಎಂದು ಪ್ರಶ್ನಿಸಿದಾಗ ಕಾಮತರು ನೀಡಿದ ಕಾರಣಗಳು, ಮುಖ್ಯವಾಗಿ ಎರಡು : 1) ಸೂಕ್ತ ವಾತಾವರಣ, ಆಹಾರ ನೀರು ಮೀನು, ಅಂದರೆ ಶಿಂಷಾ ನದಿ, ಅದರಲ್ಲಿನ ಪೈಂಟೆಡ್ ಸ್ಟಾರ್ಕ್‌ಗಳ ಹಾಗೂ ಪೆಲಿಕಾನ್‌ಗಳ ವಂಶಾಭಿವೃದ್ಧಿಗೆ ಅನುಕೂಲವಾದ ಹವಾಗುಣ, 2) ಊರಿನ ಜನ ತಲತಲಾಂತರದಿಂದ ಪಕ್ಷಿಗಳಿಗೆ ಕೊಡುತ್ತಿರುವ ರಕ್ಷಣೆ. ಊರಿನ ಜನರಲ್ಲಿ ಹಕ್ಕಿಗಳು ಬಾರದಿದ್ದಲ್ಲಿ ಊರಿಗೆ ಕೇಡು ಎನ್ನುವ ನಂಬಿಕೆ ಇರುವುದು. ಯಾರಾದರು ಹಕ್ಕಿಗಳ ಬೇಟೆಗೆ ಪ್ರಯತ್ನಿಸಿದಲ್ಲಿ ಊರಿನ ಜನರೆಲ್ಲ ಒಂದಾಗಿ ಅಂತಹವರನ್ನು ಶಿಕ್ಷಿಸುವುದರಿಂದ ಕೊಕ್ಕರೆ ಬೆಳ್ಳೂರು ಹಕ್ಕಿಗಳ ಕುಟುಂಬಕ್ಕೆ ಸುರಕ್ಷಿತ ಸ್ಥಳವಾಗಿರುವುದೇ ಇಲ್ಲಿಗೆ ವಲಸೆ ಬರಲು ಕಾರಣವೆಂದು ವಿವರಿಸಿದರು.

ನಂತರ ರಂಗನತಿಟ್ಟಿನ ಪಕ್ಷಿಧಾಮದಲ್ಲಿ ಕಾಮತರು ಅಲ್ಲಿಗೆ ವಲಸೆ ಬರುವ ಎಲ್ಲ ಹಕ್ಕಿಗಳ ಜಾತಕವನ್ನು ನೀಡಿದ್ದೇ ಅಲ್ಲದೆ ಹಕ್ಕಿಗಳ ವಲಸೆ ಕುರಿತಂತೆ ಅಗಾಧವಾದ ಮಾಹಿತಿಯನ್ನು ಧ್ವನಿ ಮುದ್ರಿಸಿಕೊಟ್ಟರು. ನಡುನಡುವೆ ಮನುಷ್ಯನ ಸ್ವಾರ್ಥಕ್ಕೆ, ಕೃಷಿಯಲ್ಲಿ ಕ್ರಿಮಿನಾಶಕಗಳ ಉಪಯೋಗದಿಂದಾಗಿ ಈ ಪಕ್ಷಿಗಳಿಗೆ ಆಗಿರಬಹುದಾದ ಆಹಾರದ ಕೊರತೆ ಕಾಡುಗಳ ನಾಶದಿಂದಾಗಿ ವಲಸೆ ಹಕ್ಕಿಗಳ ಮೇಲೆ ಆಗುತ್ತಿರುವ ದುಷ್ಪರಿಣಾಮಗಳು ಮುಂತಾದ ಸಮಸ್ಯೆಗಳ ಬಗ್ಗೆ ಅವರಿಗಿದ್ದ ಕಳವಳವನ್ನು ಹಂಚಿಕೊಂಡರು. ಈಗ್ಗೆ 20 ವರ್ಷದ ಹಿಂದೆ ರೈತರಿಗೆ ಕ್ರಿಮಿನಾಶಕಗಳ ಬಳಕೆ

ಹೆಚ್ಚು ಮಾಡಿ ಹೆಚ್ಚು ಬೆಳೆಯಲು ಆಕಾಶವಾಣಿಯೇ ಪ್ರೋತ್ಸಾಹಿಸುತ್ತಿತ್ತು. ಆದರೆ ಕಾಮತರು ಹಚ್ಚು ಬಳಕೆಯಾಗತೊಡಗಿದ್ದ ಕ್ರಿಮಿನಾಶಕಗಳ ದುಷ್ಪರಿಣಾಮಗಳ ಬಗ್ಗೆ ಚಿಂತಿಸಿದ್ದರು.

ಪಶ್ಚಿಮ ಘಟ್ಟಗಳ ದೊಡ್ಡ ದೊಡ್ಡ ಜಲವಿದ್ಯುತ್ ಯೋಜನೆಗಳು ಹೇಗೆ ಕಾಡನ್ನು ಮುಳುಗಿಸಿ, ಕೋಟ್ಯಾಂತರ ವರ್ಷಗಳಿಂದ ಆ ನೆಲೆಯಲ್ಲಿ ಜೀವಿಸಿದ್ದ ಅಸಂಖ್ಯ ಕ್ರಿಮಿಕೀಟಗಳು, ಹಿರಿಕಿರಿ, ಮುಂದಿನ ಪೀಳಿಗೆಗಾಗಿ ಸಸ್ಯ ಸಂಪತ್ತು ನಾಮಾವಶೇಷವಾಯಿತೆಂದು ನೊಂದು ನುಡಿಯುತ್ತಿದ್ದರು. ಅದೇ ರೀತಿ ಮಲೆನಾಡು ಪ್ರದೇಶದಲ್ಲಿ ಅಕೇಶಿಯ ಅಥವಾ ನೀಲಗಿರಿ ಕಾಡುಗಳ ಬೆಳೆಸುವಿಕೆಯಿಂದಾಗಿ ಹೇಗೆ ಸಸ್ಯವೈವಿಧ್ಯ ಹಾಗೂ ಜೀವಿವೈವಿಧ್ಯಗಳೂ ಇಲ್ಲದರತಾಗುತ್ತದೆಯೆಂದು ವಿವರಿಸುತ್ತಿದ್ದರು.

ಕಾಡುಗಳನ್ನು ಜೈವಿಕ ವೈವಿಧ್ಯ ರಕ್ಷಣೆಗಾಗಿ ಕಾಪಾಡುವುದೇನೋ ಸರಿ. ಆದರೆ, ಅರಣ್ಯಗಳನ್ನು ಕೇವಲ ವ್ಯರ್ಥ ಸಂಪತ್ತನ್ನಾಗಿ ಮಾಡಿಕೊಳ್ಳದೇ ಅವುಗಳನ್ನು ರಕ್ಷಿಸಿಕೊಂಡೇ ಅವುಗಳಿಂದ ಆರ್ಥಿಕ ಲಾಭ ಯಾವ ರೀತಿ ಪಡೆಯಬಹುದು? ಎನ್ನುವುದರ ಬಗ್ಗೆಯೂ ಕಾಮತರು ಚಿಂತಿಸಿದ್ದರು. ಅಮೇರಿಕಾ ಹಾಗೂ ಇತರ ಪಾಶ್ಚಾತ್ಯ ದೇಶಗಳಲ್ಲಿ ಹೇಗೆ ಅರಣ್ಯಗಳನ್ನು ಉಳಿಸಿಕೊಂಡು ಅವುಗಳಿಂದ ಲಾಭ ಪಡೆಯುತ್ತಾರೆಂದು ವಿವರಿಸಿದ್ದರು. ಅಂದರೆ ಕಾಮತರ ಪರಿಸರ ಚಿಂತನೆ ಹೆಚ್ಚು ಪ್ರಾಕ್ಟಿಕಲ್ ಆಗಿತ್ತು. ಇತ್ತೀಚಿನ ದಿನಗಳಲ್ಲಿ, ಉಪ್ಪಾಗೆ, ಕಾರೆ, ತಾರೆ, ಅಂಟವಾಳ ಮೊದಲಾದ ಅರಣ್ಯೋತ್ಪನ್ನಗಳಿಗೆ ಅಂತರ ರಾಷ್ಟ್ರೀಯ ಮಾರುಕಟ್ಟೆ ಸಿಗುತ್ತಿರುವುದನ್ನು ಗಮನಿಸಿದಾಗ ಕಾಮತರು 20 ವರ್ಷಗಳ ಹಿಂದೆ ಆಡಿದ ಮಾತುಗಳು ನಿಜವಾಗುತ್ತಿರುವುದನ್ನು ಕಾಣಬಹುದು. ಕಾಮತರ ಜೊತೆಗಿನ ಈ ಪ್ರವಾಸದಲ್ಲಿ - ಮಕ್ಕಳಿರಬಹುದು, ಹಳ್ಳಿಯ ಹಿರಿಯರಿರಬಹುದು, ಅಥವಾ ಅರಣ್ಯ ಇಲಾಖೆಯ ಸಿಬ್ಬಂದಿಯಿರಬಹುದು, ಎಲ್ಲರೊಂದಿಗೆ ಬೆರೆತು, ಅವರವರ ಮಟ್ಟಕ್ಕಿಳಿದು, ಅವರ ಸುಖ ದುಃಖ ವಿಚಾರಿಸುತ್ತಿದ್ದ ರೀತಿ ನನಗೆ ಬಹಳ ಇಷ್ಟವಾಯಿತು. ಪ್ರವಾಸದ ಕೊನೆಗೆ, ಅರಣ್ಯ ಸಿಬ್ಬಂದಿಯೊಂದಿಗೆ ನಮ್ಮೆಲ್ಲರ ಫೋಟೋ ತೆಗೆದು, ಬೆಂಗಳೂರಿಗೆ ಬಂದವರೇ ಅದನ್ನು ಪ್ರಿಂಟ್ ಮಾಡಿ ಮೌಂಟ್ ಮಾಡಿದ ಫೋಟೋ ಪ್ರತಿಯನ್ನು ಕಳಿಸಿಕೊಟ್ಟಿದ್ದನ್ನು ಮರೆಯಲು ಹೇಗೆ ಸಾಧ್ಯ?

ಮತ್ತೊಮ್ಮೆ ಮೈಸೂರಿಗೆ ಕುವೆಂಪು, ಚದುರಂಗ, ಭೈರಪ್ಪ ಮೊದಲಾದ ಹಿರಿಯ ಸಾಹಿತಿಗಳ ಮನೆಗೆ ಡಾ. ಜ್ಯೋತ್ಸ್ನಾರೊಡನೆ ಹೊಗಿದ್ದೆವು. ಅಲ್ಲಿ ಡಾ. ಜ್ಯೋತ್ಸ್ನಾ ಸಾಹಿತಿಗಳೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದರೆ, ಕಾಮತರು ಸಾಹಿತಿಗಳ ವಿವಿಧ ಭಂಗಿಯ ಫೋಟೋ ತೆಗೆಯುತ್ತಲೇ ಇರುತ್ತಿದ್ದರು. ಹಾಗೆಯೇ ಮೈಸೂರಿನ ಅರಸು

ಮನೆಗಳಲ್ಲಿದ್ದ ಮೈಸೂರು ಸಾಂಪ್ರದಾಯಿಕ ಶೈಲಿಯ ಚಿತ್ರಗಳ ಫೋಟೋ ಕೂಡ ತೆಗೆದದ್ದುಂಟು.

ಆ ಒಂದು ಪ್ರವಾಸದಲ್ಲೇ ಕಾಮತರು ಅದೆಷ್ಟು ರೀಲು ಫೋಟೋ ತೆಗೆದರೋ ಏನೋ! ಈ ಫೋಟೋಗಳಿಂದ ಆದಾಯವಂತೂ ಸೊನ್ನೆ. ಅಷ್ಟೊಂದು ಫೋಟೋ ತೆಗೆಯುವ ಉದ್ದೇಶವಾದರೂ ಏನು ಎಂದು ನಾನು ಕಾಮತರ ಫೋಟೋ ಹುಚ್ಚಿಗೆ ಆಶ್ಚರ್ಯ ಪಟ್ಟಿದ್ದೆ. ಕಾಮತರ ಉದ್ದೇಶ, ನಮ್ಮ ಸಂಸ್ಕೃತಿ, ಪರಿಸರಗಳ ವೈವಿಧ್ಯತೆಯನ್ನು ಭವಿಷ್ಯಕ್ಕಾಗಿ (**posterity** ಮುಂದಿನ ಪೀಳಿಗೆಗಾಗಿ) ಕಾದಿಡುವುದು, ಎಂದು ಅರಿತಮೇಲೆ ಅವರ ಕೈಂಕರ್ಯದ ಮಹತ್ವ ತಿಳಿಯಿತು. ಅವರ ಮಗ ವಿಕಾಸ ಕಾಮತರ ವೆಬ್ಸೈಟ್ ಕಾಮತರ ಫೋಟೋಗಳನ್ನು ಉಪಯೋಗಿಸಿಕೊಂಡು, ಭಾರತೀಯ ಸಂಸ್ಕೃತಿ, ಜೀವ-ವೈವಿಧ್ಯ, ಸಾಮಾಜಿಕ ಜೀವನಗಳ ಬಗ್ಗೆ ಅಮೂಲ್ಯ ಮಾಹಿತಿಯನ್ನು ಜಗತ್ತಿನಾದ್ಯಂತ ಆಸಕ್ತರಿಗೆ ಲಭ್ಯಮಾಡಿರುವುದು ಒಂದು ಅಪೂರ್ವ ಸಾಧನೆ. ಕಾಮತರು ಫೋಟೋ ತೆಗೆಯಲು ಆರಂಭ ಮಾಡಿದಾಗ ವೆಬ್‌ಸೈಟ್‌ನ ಪರಿಕಲ್ಪನೆ ಇರಲಿಲ್ಲವಾದರೂ, ದಾಖಲೆಗಾಗಿ, ಹಿಂದೆ ತೆಗೆದ ಚಿತ್ರಗಳ ಬಳಕೆ ಮಾಡುತ್ತಿದ್ದರು. ಅದರಲ್ಲೂ ಐತಿಹಾಸಿಕ ಮಹತ್ವದ ಅವಶೇಷಗಳ ಛಾಯಾಚಿತ್ರಗಳು ಡಾ. ಜ್ಯೋತ್ಸ್ನಾ ಕಾಮತರ ಐತಿಹಾಸಿಕ ಲೇಖನಗಳ ಮೌಲ್ಯವನ್ನು ಇಮ್ಮಡಿಗೊಳಿಸಿದೆಯೆಂದರೆ ಉತ್ಪ್ರೇಕ್ಷೆಯಲ್ಲ. ಡಾ. ಶೇಷಶಾಸ್ತ್ರಿ ಅವರ ಇತಿಹಾಸ ಬರವಣಿಗೆಗೆ ಸಹ ಡಾ. ಕಾಮತರು ಛಾಯಾಚಿತ್ರ ಒದಗಿಸಿದ್ದಾರೆ.

ಕಾಮತರ ಸರಳ ಜೀವನ ಶೈಲಿ ಅವರ ಜೀವನ ತತ್ವವಾಗಿತ್ತು. ಅಮೇರಿಕಾದಲ್ಲಿ ಪಿಹೆಚ್.ಡಿ., ಮಾಡುವಾಗ ಅಲ್ಲಿಯ ಜೀವನ ಶೈಲಿಗೆ ಮಾರು ಹೋಗದೆ ಪರಂಪರಾನುಗತವಾಗಿ ಭಾರತೀಯರು ಮೈಗೂಡಿಸಿಕೊಂಡ ಜೀವನಶೈಲಿ ಅವರಿಗೆ ಮಹತ್ವದ್ದೆನಿಸಿತು. ಅದರ ಬಗ್ಗೆ ಹೆಮ್ಮೆಯನ್ನು ನಾವು ಅವರ ಬರವಣಿಗೆಯಲ್ಲಿ ಕಾಣುತ್ತೇವೆ. ಕಾಮತರು ಬರೀ ಹೆಮ್ಮೆ ಪಡುವುದರಲ್ಲಿ ಖುಷಿ ಕಾಣದೆ ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು.

ಕೊಳ್ಳುಬಾಕ ಸಂಸ್ಕೃತಿಯ ಲಾಂಛನಗಳಾದ ಟಿ.ವಿ. - ರೇಡಿಯೋ ಕಾರುಗಳನ್ನು ಅವರೆಂದೂ ಉಪಯೋಗಿಸಲಿಲ್ಲ. ಅಮೇರಿಕಾದಲ್ಲಿ ಉಳಿದುಕೊಂಡು ವೈಭವೋಪೇತ ಜೀವನ ನಡೆಸಬಹುದಾಗಿದ್ದ ಕಾಮತ್, ಜೊಬನೇರ್, ಪ್ಲಾಸಿಯಂತಹ ಕೊಂಪೆಗಳಲ್ಲಿ ಕೆಲಸವನ್ನು ಆಯ್ಕೆ ಮಾಡಿಕೊಂಡರು. ಅಲ್ಲಿ ಹೋದರೂ ಅಲ್ಲಿಯ ಸಾಮಾನ್ಯ ಜನರೊಂದಿಗೆ ಸಂಪರ್ಕ ಬೆಳೆಸಿ, ಬೆರೆತು ಸುಖ ಕಂಡರು. ಬಸ್ತರ್ ಬುಡಕಟ್ಟು ಜನಾಂಗದ ಬಗ್ಗೆ ಪ್ಲಾಸಿಯ ಕಾರ್ಮಿಕರ ಬಗ್ಗೆ, ಅವರ ಬರವಣಿಗೆ,

ಮೌಲಿಕವಾಗಿರುವುದು ಈ ಕಾರಣದಿಂದಲೇ, ಕಾಮತರ ಸರಳತೆ ಸಹಜವಾಗಿ ಅವರ ಸಾಹಿತ್ಯದಲ್ಲಿ ಮೈದಾಳಿದೆ. **Style is the man** (ಸ್ಟೈಲ್ ಇಜ್ ದಿ ಮ್ಯಾನ್) ಅನ್ನುವ ಮಾತಿದೆ. ಕಾಮತರ ಬರವಣಿಗೆಯು ಇದಕ್ಕೆ ಉತ್ತಮ ಉದಾಹರಣೆಯನ್ನಬಹುದು. ಅವರ ವೈಜ್ಞಾನಿಕ ಬರಹಗಳಾಗಲೀ, ಪ್ರವಾಸಕಥನಗಳಾಗಲೀ, ಅತ್ಯಂತ ಸರಳ ಭಾಷೆಯಲ್ಲಿ ನಿರೂಪಿತಗೊಂಡಿವೆ. ಹೇಳಬೇಕಾದ ವಿಷಯ ಅತಿ ಸ್ಪಷ್ಟವಾಗಿದ್ದಾಗ ಮಾತ್ರ ಆ ಸರಳತೆ ಸಾಧ್ಯ. ಗಾಂಧೀಜಿ ಬರವಣಿಗೆಯಲ್ಲಿ ಕಾಣುವ ಸರಳತೆ ಈ ಬಗೆಯದು.

ಕಾಮತರನ್ನು ನನ್ನ ಹುಟ್ಟೂರು, ಸಾಗರ ತಾಲೂಕಿನ ಹೂಗೊಪ್ಪಲಿಗೆ ಕರೆದುಕೊಂಡು ಹೋಗಬೇಕೆಂದು ಬಹಳ ಸಲ ಪ್ರಯತ್ನಪಟ್ಟೆ. ಸಂಕೋಚ ಸ್ವಭಾವದ ಕಾಮತರಿಗೆ, ಗ್ರಾಮೀಣ ಸಂಸ್ಕೃತಿಯ ಬಗ್ಗೆ ತೀವ್ರ ಆಸಕ್ತಿ ಇದ್ದರೂ, ತನ್ನಿಂದಾಗಿ ಇನ್ನೊಬ್ಬರಿಗೆ ವೃಥಾ ತೊಂದರೆಯಾದೀತೆಂದು ಬರಲು ಹಿಂಜರಿಯುತ್ತಿದ್ದರು. ನನ್ನ ಕೋರಿಕೆಯನ್ನು ಏನೇನೋ ಸಬೂಬು ಹೇಳಿ ನಿರಾಕರಿಸುತ್ತಲೇ ಬಂದಿದ್ದರು. ಅಂತೂ ನಾಲ್ಕೈದು ವರ್ಷಗಳ ವರಾತದ ಫಲ ಹಾಗೂ ಮಲೆನಾಡಿನ ಭೂಮಿ ಹುಣ್ಣಿಮೆ ಹಬ್ಬದ ವಿಶೇಷದ ಬಗ್ಗೆ ವರ್ಣಿಸಿ, ಅದರಲ್ಲೂ ಭೂಮಿ ಹುಣ್ಣಿಮೆ ಕಲಾತ್ಮಕ ಬುಟ್ಟಿಯ ಫೋಟೋ ತೆಗೆಯಬಹುದು ಎಂದು ಪುಸಲಾಯಿಸಿದಾಗ ಕೊನೆಗೂ ಬರಲು ಒಪ್ಪಿದರು. ಹಳ್ಳಿಯ ನಮ್ಮ ಮನೆಯಲ್ಲಿ ನನ್ನ ತಂದೆ, ತಾಯಿ ಹಾಗು ತಮ್ಮನ ಮನಸ್ಸನ್ನು ಹೋದ ಕ್ಷಣದಿಂದಲೇ ಗೆದ್ದು ಬಿಟ್ಟಿದ್ದರು. ವಿದೇಶದಲ್ಲಿ ಡಾಕ್ಟರೇಟ್ ಪಡೆದ ವಿಜ್ಞಾನಿ, ಲೇಖಕನೊಬ್ಬ ಹಳ್ಳಿಯವನಂತೆ ಬನೀನು, ನಿಕ್ಕರ್‌ನಲ್ಲಿ ಓಡಾಡುವ ಸರಳತೆ ಮನೆಯವರಿಗೆಲ್ಲಾ ಆಶ್ಚರ್ಯದ ವಿಷಯವಾಗಿತ್ತು. ಎಲ್ಲರೊಂದಿಗೂ ಆತ್ಮೀಯವಾಗಿ ನಡೆದುಕೊಳ್ಳುವ ಕಾಮತರ ರೀತಿ, ಅವರನ್ನು ಅಪರಿಚಿತರೆಂದೆನಿಸಲೇ ಇಲ್ಲ. ನನ್ನ ಮಗನಂತೂ ಅವರ ಹಿಂದೆ ಬಾಲವಾಗಿ ಸದಾ ಸೋಣೆಯುತ್ತಿದ್ದ.

ಕಾಮತರು, ಊರಿನ, ಹಲವು ಮನೆಗಳಿಗೆ ಭೇಟಿ ಇತ್ತರು. ಹಳೇ ಕಾಲದ ಓಲೆಗರಿ, ಹಳೇ ಕಾಲದ ಆಭರಣಗಳ ಫೋಟೋ ತೆಗೆದರು. ಯಾವುದೇ ವಸ್ತುವಿನಲ್ಲಿ ಪ್ರಾಚೀನತೆಯಿದೆಯೆಂದರೆ ಅದರ ಫೋಟೋ ದಾಖಲೆ ಮಾಡಿ ಬಿಡುತ್ತಿದ್ದರು. ಭೂಮಿ ಹುಣ್ಣಿಮೆಯ ದಿನವಂತೂ ಕಾಮತರ ಉತ್ಸಾಹವನ್ನು ನೋಡಿಯೇ ಖುಷಿಯಾಗುತ್ತಿತ್ತು. ಭೂಮಿ ಹುಣ್ಣಿಮೆಬುಟ್ಟಿಹೊತ್ತು ಬರುತ್ತಿದ್ದ ಹೆಂಗಳೆಯರನ್ನು ನಿಲ್ಲಿಸಿ ಮಾತಾಡಿಸಿ, ನಗಿಸಿ ಅವರ ಸಂಕೋಚ ಹೋಗಲಾಡಿಸಿ ಅವರ ಒಪ್ಪಿಗೆ ಪಡೆದು ಬುಟ್ಟಿಯನ್ನು, ಬುಟ್ಟಿಹೊತ್ತ ಮಹಿಳೆಯನ್ನೂ ಫೋಟೋ ತೆಗೆಯುತ್ತಿದ್ದರು. ಡಾ. ಕಾಮತರನ್ನು ಕೆಳದಿ, ಇಕ್ಕೇರಿ, ಕಲಸೆಗೆ ಕರೆದುಕೊಂಡು ಹೋದೆ. ಕಲಸೆಯಲ್ಲಿ ಫೋಟೋ ತೆಗೆಯುವಾಗ,

ಅಲ್ಲಿನ **Caretaker** (ಕಾವಲುಗಾರನಿ)ಗೆ ಏನಾದರೂ ಆಕ್ಷೇಪಣೆಯಿದೆಯೇ ಎಂದು ಕೇಳಿ, ಫೋಟೋ ತೆಗೆದರು. ಸಾಮಾನ್ಯವಾಗಿ ಛಾಯಾಚಿತ್ರಗ್ರಾಹಕರು ನಾಚಿಕೆ, ಸಂಕೋಚ ತೊರೆದವರಾಗಿದ್ದು, ಫೋಟೋ ತೆಗೆಯಲು ಹೋಗಿ, ಬೈಸಿಕೊಂಡೋ ಕ್ಯಾಮರಾ ಜಪ್ತು ಮಾಡಿಸಿಕೊಂಡೋ ಬರುವ ಸನ್ನಿವೇಶ ಸಾಮಾನ್ಯ. ಆದರೆ ಕಾಮತ್, ಅನುಮತಿಯಿಲ್ಲದೇ ಫೋಟೋ ತೆಗೆಯುವವರಲ್ಲ. ಅದು, ಸ್ಮಾರಕವಾಗಿರಬಹುದು, ಸಾಹಿತಿಗಳದ್ದಾಗಿರಬಹುದು, ಅಥವಾ ಮುಗ್ಧ ಹಳ್ಳಿಯ ಹೆಣ್ಣು ಮಕ್ಕಳಾಗಿರಬಹುದು. ಅನುಮತಿ ಪಡದೇ ಫೋಟೋ ತೆಗೆಯುವವರು! ಪ್ರಾಚೀನ ಸ್ಮಾರಕಗಳಲ್ಲಿ ಯಾವುಯಾವುದೇ ಚಟುವಟಿಕೆಗಳಿಗೆ ಅಸ್ಪದವಿದ್ದರೂ. ಫೋಟೋ ಕ್ಲಿಕ್ಕಿಸಲು ಮಾತ್ರ ಪ್ರತಿಬಂಧವಿರುವುದು ಭಾರತದಲ್ಲಿಯೇ! ಎಂದು ಕಾಮತರು ವಿಷಾದ ಪಡುತ್ತಿದ್ದರು.

ಕಲಸೆಯಿಂದ ಮನೆಗೆ ಹಿಂದಿರುಗುವಾಗ ಬಸ್ಸಿನಲ್ಲಿ ಬರುತ್ತಿದ್ದೆವು. ಬಸ್ಸಿನ ಸೀಟಿನಲ್ಲಿ ಹೊರಹೊರಟ್ಟಿದ್ದ ಚಿಕ್ಕ ಮೊಳೆಯೊಂದು ಕಾಮತರಿಗೆ ತಗಲಿ, ಗಾಯವಾಗಿ ರಕ್ತ ಸುರಿಯತೊಡಗಿತ್ತು. ಬಸ್ ಕಂಡಕ್ಟರ್‌ನನ್ನು ಕಾಮತರು ತರಾಟೆಗೆ ತೆಗೆದುಕೊಂಡು ಅವನ ನಿರ್ಲಕ್ಷ್ಯವನ್ನು ಮನವರಿಕೆ ಮಾಡಿಕೊಟ್ಟಿದ್ದು ಕಣ್ಣಿಗೆ ಕಟ್ಟಿದಂತಿದೆ. ಅದೇ ರೀತಿ, ಬ್ಯಾಂಕ್‌ನಲ್ಲಿ ಸೇವೆಯಲ್ಲಿ ನ್ಯೂನತೆ ಕಂಡು ಬಂದು ಠೇವಣಿ ವಾಪಸ್ಸು ತೆಗೆದುಕೊಳ್ಳುವೆನೆಂದು ಬ್ಯಾಂಕ್ ಸಿಬ್ಬಂದಿಯನ್ನು ಹೆದರಿಸಿದ್ದುಂಟೆಂದು, ಕಾಮತರು ಹೇಳಿದ್ದನ್ನು ಕೇಳಿದ್ದೇನೆ. ಸಾರ್ವಜನಿಕ ಸೇವೆಗಳಲ್ಲಿ ಕೊರತೆ ಕಂಡು ಬಂದಲ್ಲಿ ತೆಪ್ಪಗೆ ಸಹಿಸದೆ, ತಮ್ಮ ಹಕ್ಕಿಗೆ ಹೋರಾಡುವ ಸ್ವಭಾವ ಕಾಮತರದ್ದಾಗಿತ್ತು. ಆ ದೃಷ್ಟಿಯಲ್ಲಿ ಕಾಮತ್ ಒಬ್ಬ ಎಚ್ಚರವುಳ್ಳ ಗ್ರಾಹಕರೂ ಆಗಿದ್ದರು.

ಕಾಮತರೊಂದಿಗೆ ನಮ್ಮ ಹಳ್ಳಿಯಲ್ಲಿ ನಾನು ಕಳೆದ ಆ 2-3 ದಿನಗಳು ಅವರ ಬಹುಮುಖ ವ್ಯಕ್ತಿತ್ವವನ್ನು ಹತ್ತಿರದಿಂದ ನೋಡುವ ಸ್ಮರಣೀಯ ಸಂದರ್ಭವೆಂದು ನಾನು ಭಾವಿಸುತ್ತೇನೆ.

ಕವಿ ಗೋಪಾಲಕೃಷ್ಣ ಅಡಿಗರು ಒಮ್ಮೆ ಮೈಸೂರು ಆಕಾಶವಾಣಿಯಲ್ಲಿ ಧ್ವನಿಮುದ್ರಣಕ್ಕೆ ಬಂದಿದ್ದರು. ಡಾ. ಯು.ಆರ್. ಅನಂತಮೂರ್ತಿಯವರೊಂದಿಗೆ ಕಾಮತ್ ದಂಪತಿಗಳ ಬಗ್ಗೆ ಮಾತನಾಡುತ್ತಾ "ಹಣ ಮಾಡುವ ಆಸೆ ಸ್ವಲ್ಪವೂ ಇಲ್ಲದ ಅಪರೂಪದ ವ್ಯಕ್ತಿಗಳು" ಎಂದು ಬಣ್ಣಿಸಿದ್ದನ್ನು ಕಿವಿಯಾರೆ ಕೇಳಿದ್ದೇನೆ. ಹಣ ಮಾಡುವ ಆಸೆ ಇರಲಿಲ್ಲವೆಂದಾಕ್ಷಣ ಹಣದ ಮಹತ್ವದ ಅರಿವಿಲ್ಲವೆಂದರ್ಥವಲ್ಲ. ದಿನನಿತ್ಯದ ಅವಶ್ಯಕತೆಗಳಿಗೆ, ಪರಾವಲಂಬಿಯಾಗದೆ ಸ್ವಾವಲಂಬಿಯಾಗಿ ಗೌರವಯುತವಾಗಿ ಬದುಕು ಸಾಗಿಸಲು ಹಣದ ಅವಶ್ಯಕತೆಯನ್ನು ಅರಿತಿದ್ದರು. ಹಣವನ್ನು ಅಪವ್ಯಯ ಮಾಡುತ್ತಿರಲಿಲ್ಲ. ಆದರೆ ಹಣಕ್ಕಾಗಿಯೇ ಯಾವ ಕೆಲಸವನ್ನೂ

ಮಾಡಿದವರಲ್ಲ. ಕಾಮತರು ಎಂದೂ ಕೇವಲ, ತಮ್ಮ ಸಂಸಾರದ ಒಳಿತಿನ ಬಗ್ಗೆ ಮಾತ್ರ ಚಿಂತಿಸಿದವರಲ್ಲ; ಅವರ ಸಂಪರ್ಕಕ್ಕೆ ಬಂದ ಎಲ್ಲರ ಬಗ್ಗೆಯೂ ಅವರ ಕಾಳಜಿ ಇರುತ್ತಿತ್ತು. ಸ್ನೇಹಿತರಿಗೆ ಅಥವಾ ಅವರ ನೆರವು ಬೇಡಿ ಬಂದ ಯಾರಿಗೂ ಇಲ್ಲ ಎಂದವರಲ್ಲ. ಅದಕ್ಕಾಗಿ ಎಂದೂ ಪ್ರತಿಫಲ ಪಡೆದವರಲ್ಲ. ತಮ್ಮ ಅನುಭವ, ಶ್ರಮ, ಸಮಯ ಇನ್ನೊಬ್ಬರಿಗೆ ಉಪಯೋಗವಾಗುವುದಾದಲ್ಲಿ ಅದರಿಂದ ಕೃತಕೃತ್ಯತೆ ಕಂಡವರು ಕಾಮತರು. ಯಾವುದೇ ವಿಷಯದ ಬಗ್ಗೆ ಮಾಹಿತಿ ಕೇಳಿ, ಅವರ ಬಳಿ ಹೋದಲ್ಲಿ ತಮ್ಮ ತೊಂದರೆಯನ್ನು ಲೆಖ್ಖಿಸದೇ ಅವರು ಸಹಾಯ ಮಾಡುತ್ತಿದ್ದರು. ಹೀಗೆ ಅವರಿಂದ ಮಾರ್ಗದರ್ಶನ ಪಡೆದವರು ಬಹಳ ಜನ. ನೊಂದವರಿಗೆ ಯಾವಾಗಲೂ ಅವರು ಸಾಂತ್ವನವನ್ನು ನೀಡುತ್ತಿದ್ದರು.

ನಾನು ಒಮ್ಮೆ ನೊಂದು ಖಿನ್ನವಾಗಿ ಅವರ ಮನೆಗೆ ಹೋದಾಗ, ನನ್ನ ಸಂಕಟವನ್ನು ಸಹಾನುಭೂತಿಯಿಂದ ಕೇಳಿ, ಸ್ಪಂದಿಸಿ ಸಾಂತ್ವನ ನೀಡಿ ಕಳಿಸಿದ್ದನ್ನು ಮರೆಯಲಾರೆ.

ಡಾ. ಕೃಷ್ಣಾನಂದ ಕಾಮತ್ ಜೀವನವಿಡೀ ನೆನಪಿನಲ್ಲಿರುವ ಸರಳ ವ್ಯಕ್ತಿ.

# ನಮ್ಮ ಕಾಮತರು

*- ರವಿ ಹೆಗಡೆ*

**ನಾ**ವು ನಮ್ಮ ಜೀವಿತಾವಧಿಯಲ್ಲಿ ದಿನನಿತ್ಯ ಹಲವರನ್ನು ಸಂಧಿಸುತ್ತೇವೆ, ಅವರೊಡನೆ ಒಡನಾಡುತ್ತೇವೆ. ಹಾಗೆ ಒಡನಾಡಿದವರಲ್ಲಿ ಕೆಲವೇ ಕೆಲವರು ನಮ್ಮ ನೆನಪಲ್ಲಿ ಬಹುಕಾಲ ಉಳಿಯುವಂಥವರು. ಹಾಗೆ ಬಹುಕಾಲ ಉಳಿಯಲು ಅವರ ಜೀವನ, ಶಿಸ್ತು, ಸಾಧನೆ, ಹುದ್ದೆ, ರೂಪ ಮೊದಲಾದವು ಕಾರಣವಾಗಿರಬಹುದು.

ನನ್ನ ಸುತ್ತಣ ಸಮಾಜದಲ್ಲಿ ಪ್ರಮುಖರೆನಿಸಿದವರು ತಮ್ಮ ಜೀವಿತಾವಧಿಯಲ್ಲಿ ತುಳಿದ ಹಾದಿ, ಮೈಗೂಡಿಸಿಕೊಂಡ ಶಿಸ್ತುಬದ್ಧಜೀವನವನ್ನೇ ಕುತೂಹಲದಿಂದ ಅವಲೋಕಿಸುವ ನನ್ನ ಬುದ್ಧಿಗೆ ಡಾ. ಕಾಮತರ ನಿಷ್ಕಲ್ಮಷ ಮನಸ್ಸು, ಇತರ ಜೀವಜಗವನ್ನು ಗೌರವಿಸುವ ಉದಾರ ಗುಣ ಮತ್ತು ದಿನನಿತ್ಯದ ಜೀವನದಲ್ಲಿ ತಮ್ಮ ವಿಜ್ಞಾನ ಓದಿನ ಅನುಭವವನ್ನು ಅಳವಡಿಸಿಕೊಂಡ ರೀತಿ, ಅವರು ನನ್ನ ಮನದಲ್ಲಿ ಅಚ್ಚಳಿಯದೆ ಇರಲು ಕಾರಣ.

ಡಾ. ಕಾಮತರ ಓದು, ಬರಹ ದೊಡ್ಡದು. ಅದಕ್ಕಿಂತ ಅವರ ಜೀವನ ಇನ್ನೂ ದೊಡ್ಡದು. ಅದು ಅವರೊಂದಿಗಿನ ಅಲ್ಪಕಾಲದ ಒಡನಾಟದಿಂದಲೇ ಖಚಿತವಾದಂಥದು. ಒಬ್ಬ ವಿಜ್ಞಾನಿಯಾಗಿ, ಸಾಹಿತಿಯಾಗಿ ಯಾವೆಲ್ಲ ಶ್ರೇಷ್ಠ ಗುಣಗಳನ್ನು ನಾವು ಅವರಲ್ಲಿ ಅಪೇಕ್ಷಿಸಬಲ್ಲೆವೋ ಆ ಎಲ್ಲ ಗುಣಗಳನ್ನೂ ಅವರು ಹೊಂದಿದ್ದರು. ಅಂಥ ವ್ಯಕ್ತಿ ನಮ್ಮ ಮಧ್ಯೆ ಬದುಕಿದ್ದರು, ಎನ್ನಲು ನಮಗೆ ಹೆಮ್ಮೆಯೆನಿಸಬೇಕು. ಡಾ. ಕಾಮತರ ಸಾಹಿತ್ಯವನ್ನು ಓದುವಾಗ ನನಗೆ ಡಾ. ಬಿ.ಜಿ.ಎಲ್. ಸ್ವಾಮಿಯವರ ನೆನಪು ಬರುತ್ತದೆ. ಇಬ್ಬರೂ ರಚಿಸಿದ ವೈಜ್ಞಾನಿಕ ಸಾಹಿತ್ಯದಲ್ಲಿ ಸಾಮ್ಯತೆಯಿದೆ. ದಿನನಿತ್ಯದ ಬದುಕಿನ ಹಿನ್ನೆಲೆಯಲ್ಲಿ, ಪುರಾಣ ಕಲ್ಪನೆಗಳ ಹಿನ್ನೆಲೆಯಲ್ಲಿ ಪ್ರಾಣಿಶಾಸ್ತ್ರವನ್ನೋ, ಸಸ್ಯಶಾಸ್ತ್ರವನ್ನೋ ತೀರ ಸ್ವಾರಸ್ಯಕರವಾಗಿ ತೀರ ಸಾಮಾನ್ಯರಿಗೂ ಅರ್ಥವಾಗುವಂತೆ ಕನ್ನಡದಲ್ಲಿ ವೈಜ್ಞಾನಿಕ ಸಾಹಿತ್ಯ ರಚಿಸಿದ

ಪ್ರಮುಖರಲ್ಲಿ ಒಬ್ಬರು ಡಾ. ಬಿ.ಜಿ.ಎಲ್. ಸ್ವಾಮಿ. ಇನ್ನೊಬ್ಬರು ಡಾ. ಕಾಮತರು.

ಡಾ. ಕಾಮತರಿಗೆ ಯಾವ ವಿಚಾರವೂ ಸಣ್ಣದಲ್ಲ. ಪಶ್ಚಿಮ ಘಟ್ಟವೇ ಇರಲಿ, ಅಮೀಬವೇ ಇರಲಿ, ಚಿಕ್ಕ ಇರುವೆಯೋ ಅಥವಾ ಕಾಗೆಯೋ ಇರಲಿ, ಎಲ್ಲವನ್ನೂ ಕುತೂಹಲದಿಂದ ಅವಲೋಕಿಸುತ್ತ ಸಾಹಿತ್ಯ ರಚಿಸಿದವರು. ಅವರ ಸಾಹಿತ್ಯವು ಅವರ ಅನುಭವದಿಂದ ಹುಟ್ಟಿದ್ದು. ಅಂಥ ಸಾಹಿತ್ಯವು ಬಹುಕಾಲ ಬಹು ಜನರನ್ನು ಆಕರ್ಷಿಸುವ ಸಾಮರ್ಥ್ಯವುಳ್ಳದ್ದು.

ತನ್ನ ಸುತ್ತ ಬದುಕುತ್ತಿರುವ ಉಳಿದೆಲ್ಲ ಜೀವಸಂಕುಲಕ್ಕೂ ತನ್ನಂತೆಯೇ ಬದುಕುವ ಹಕ್ಕು ಇದ್ದೇ ಇದೆ! ಎಂಬುದನ್ನು ಬಲವಾಗಿ ಪ್ರತಿಪಾದಿಸಿದ ಪ್ರಮುಖರಲ್ಲಿ ಡಾ. ಕಾಮತರೂ ಒಬ್ಬರು. ತನ್ನ ಸುತ್ತಲ ಪ್ರಾಣಿ, ಪ್ರಪಂಚವನ್ನು ಅವರೋರ್ವ ಪ್ರಾಣಿಯ ಸ್ಥಾನದಲ್ಲಿ ನಿಂತು ಆಲೋಚಿಸುವ ಸಾಮರ್ಥ್ಯದಿಂದಾಗಿ ಅಂಥ ಶ್ರೇಷ್ಠ ವಾದವನ್ನು ಪ್ರತಿಪಾದಿಸಲು ಸಾಧ್ಯವಾಯಿತು. ಅವರ ಸಸ್ಯ, ಪ್ರಾಣಿ ಪ್ರೀತಿ ಅವರು ರಚಿಸಿದ ಸಾಹಿತ್ಯದ ಪುಟ ಪುಟಗಳಲ್ಲಿ ವ್ಯಕ್ತವಾಗಿದೆ. ಮಾನವನ ಯಾವೆಲ್ಲ ತೆರನ ದುರಾಸೆಗಳು ಜೀವ ಜಗತ್ತಿಗೆ ಮಾರಕವಾಗಿವೆ, ಮತ್ತು ನಮ್ಮ ಜೀವನ ಧೋರಣೆಯನ್ನು ಬದಲಿಸಿಕೊಂಡರೆ ಅದು ಪರಿಸರಕ್ಕೆ ಹೇಗೆ ಪೂರಕವಾಗಬಲ್ಲದು, ಎಂಬುದನ್ನು ಸಮರ್ಥವಾಗಿ ವಿವರಿಸುತ್ತದೆ, ಅವರ ಒಟ್ಟಾರೆ ಸಾಹಿತ್ಯ.

ಡಾ. ಕಾಮತರ ಜೀವನ ಶಿಸ್ತು ನನಗೆ ಡಾ. ಕಾರಂತರ ನೆನಪನ್ನು ತಂದುಕೊಡುತ್ತದೆ. ಕೆಲ ವರ್ಷಗಳ ಹಿಂದಿನ ಮಾತು. ಪಶ್ಚಿಮ ಘಟ್ಟದ ಕಪ್ಪೆ ಸಂಕುಲದ ಕುರಿತು ಸಂಶೋಧನೆ ಕೈಗೊಂಡಿದ್ದ ನನಗೆ ಆ ಜೀವಿಗಳ ಜೀವನವನ್ನು ವಿವರಿಸುವಂಥ ಪುಸ್ತಕವೊಂದನ್ನು ಏಕೆ ಬರೆಯಬಾರದು ಎಂದೆನಿಸಿ ಬರೆಯಲು ತೊಡಗಿದೆ. 'ಮಂಡೂಕ ಪ್ರಪಂಚ' ಪುಸ್ತಕದ ಹಸ್ತ ಪ್ರತಿ ಸಿದ್ಧವಾದೊಡನೆ ಮುಖಪುಟಕ್ಕೆ ಕಪ್ಪೆಯ ಆಕರ್ಷಕ ಚಿತ್ರ ಬೇಕಾಯಿತು. ಚಿತ್ರ ಆಕರ್ಷಕವಾಗಿದ್ದು ಕಪ್ಪೆಯ ಭಾವನೆಗಳನ್ನು ಬಿಂಬಿಸುವಂತಿರಬೇಕು ಎಂಬುದು ನನ್ನ ಆಸೆಯಾಗಿದ್ದುದರಿಂದ ತಕ್ಷಣ ಹೊಳೆದದ್ದು ಡಾ. ಕಾಮತರು. ಪತ್ರ ಬರೆದೆ. ಅವರು ತಮ್ಮೆಲ್ಲ ಲಕ್ಷಾಂತರ ನೆಗೆಟಿವ್‌ಗಳನ್ನು ಎರಡು ದಿನ ಸತತ ಹುಡುಕಿ "ಈ ಪುಸ್ತಕಕ್ಕೆ, ಮುಖಪುಟಕ್ಕೆ ಸರಿಹೋಗುವಂತೆ 'ಇರುಳು ಕಪ್ಪೆ' ಯ ಚಿತ್ರವೊಂದನ್ನು ಕಳಿಸುತ್ತಿದ್ದೇನೆ. ಒಪ್ಪಿಗೆಯಾದರೆ ಬಳಸಿಕೊಳ್ಳಬಹುದು" ಎಂಬ ಆತ್ಮೀಯ ಪತ್ರದೊಡನೆ ಕಪ್ಪೆಯ ಛಾಯಾಚಿತ್ರವನ್ನು ಕಳುಹಿಸಿಕೊಟ್ಟರು. ಇದು, ವಿಜ್ಞಾನಿಯಾದವರಿಗೆ, ಸಾಹಿತಿ ಎನಿಸಿಕೊಂಡವರಿಗೆ ಇರಬೇಕಾದ ಶಿಸ್ತು ಎನ್ನುವುದು. ತನ್ನ ಮೇಲೆ ವಿಶ್ವಾಸವಿರಿಸಿ ಬರೆದ ವ್ಯಕ್ತಿಯ ಜೀವನ ಸ್ತರ, ಹುದ್ದೆ ಯಾವುದೂ ಅವರಿಗೆ ಮುಖ್ಯವಾಗಿರಲಿಲ್ಲ. ಆತನ ಉತ್ಸಾಹ

ಬೆಂಬಲಿಸಬೇಕು, ನಿರಾಸೆಗೊಳಿಸಬಾರದು, ತನ್ನ ಕರ್ತವ್ಯ ತಾನು ಮಾಡಬೇಕು ಎಂಬುದೇ ಡಾ. ಕಾಮತರ ನಿಲುವಾಗಿತ್ತು. ಅವರಿಗೆ ಪತ್ರ ಬರೆದವರಿಗೆ ಉತ್ತರ ಬಂದೇ ಬರುತ್ತಿತ್ತು. ಅಂಥ ಶಿಸ್ತುಬದ್ಧ ವ್ಯಕ್ತಿಯ ತಾಳ್ಮೆಯನ್ನು ಪರೀಕ್ಷಿಸಿದ್ದು ಹಿಂದೆ ನಡೆದ ಉತ್ತರಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ. ಅವರು ಅಧ್ಯಕ್ಷರಾಗಿ ಪಾಲ್ಗೊಂಡಾಗಿನ ಘಟನೆ. ತೀರ ಆಸಕ್ತಿಯಿಂದ ಸತತ ಅಧ್ಯಯನ ನಡೆಸಿ ಉತ್ತರ ಕನ್ನಡದ ಸಾಹಿತ್ಯ ಪರಂಪರೆ, ಇತಿಹಾಸ, ಪರಿಸರ, ಕುರಿತು ಡಾ. ಕಾಮತರು ವಿವರವಾದ ಅಧ್ಯಕ್ಷ ಭಾಷಣವನ್ನು ಸಿದ್ಧಪಡಿಸಿಕೊಂಡಿದ್ದರು. ಆದರೆ ಆ ಸಾಹಿತ್ಯ ಸಮ್ಮೇಳನದ ಜವಾಬ್ದಾರಿ ಹೊತ್ತವರು ಡಾ. ಕಾಮತರಿಗೆ ಭಾಷಣ ಓದಲು ಅವಕಾಶವನ್ನೇ ಕೊಡಲಿಲ್ಲ (ಡಾ. ಕಾಮತರೇ ನನಗೆ ಸಮ್ಮೇಳನ ಮುಗಿದ ಕೆಲ ದಿನಗಳ ನಂತರ ಆ ಬಗ್ಗೆ ತಿಳಿಸಿದ್ದಿದೆ). ಒಬ್ಬ ವಿಜ್ಞಾನದ ವಿದ್ಯಾರ್ಥಿಯಾದ ನನಗೆ ಡಾ. ಕಾಮತರು ತಮ್ಮ ಅಧ್ಯಕ್ಷ ಭಾಷಣವನ್ನು ಸಿದ್ಧಪಡಿಸಲು, ವಿವರಗಳನ್ನು ಕಲೆಹಾಕಲು ಪಟ್ಟಿರಬಹುದಾದ ಕಷ್ಟದ ಅರಿವು ಇತ್ತಾದ್ದರಿಂದ ಆ ಘಟನೆ ನನಗೆ ತೀರ ಅಸಂತೋಷವನ್ನು ಉಂಟು ಮಾಡಿತು. ಡಾ. ಕಾಮತರು ಮಾತ್ರ ಆ ಘಟನೆಯಿಂದ ಸ್ವಲ್ಪವೂ ವಿಚಲಿತರಾಗದೆ ಸ್ಥಿತಪ್ರಜ್ಞರಾಗಿಯೇ ಉಳಿದರು. ಅದು ಅವರ ದೊಡ್ಡ ಗುಣ, ತಾಳ್ಮೆಯ ಪರಮಾವಧಿ. ನಮ್ಮ ತಪ್ಪನ್ನು ಡಾ. ಕಾಮತರು ಅರ್ಥೈಸಿಕೊಂಡು ಸಹಿಸಿಕೊಂಡರು. ಆದರೆ ನಾವು ಮಾತ್ರ ಅವರ ಮಟ್ಟಕ್ಕೆ ಏರಿ ಅವರನ್ನು ಅರ್ಥೈಸಿಕೊಳ್ಳುವಲ್ಲಿ ವಿಫಲರಾದೆವೆಂಬುದೇ ಇಂದಿಗೂ ನನ್ನ ಭಾವನೆ.

ಡಾ. ಕಾಮತರ ಚಿಂತನೆಯಲ್ಲಿಯೂ ಹೇಗೆ ವೈಜ್ಞಾನಿಕ ತಳಹದಿ ಇರುತ್ತಿತ್ತು, ಎಂಬುದಕ್ಕೆ ಒಂದು ಉದಾಹರಣೆ. ಒಮ್ಮೆ ಅವರೊಂದಿಗೆ ಮಾತನಾಡುತ್ತಿದ್ದಾಗ ವಿಷಯ ವಿಜ್ಞಾನದಿಂದ ಪ್ರಗತಿಯತ್ತ ಹೊರಳಿತು. ನಾನೆಂದೆ "ಸರ್, ನಮ್ಮ ಜಿಲ್ಲೆ ಮತ್ತು ಪಕ್ಕದ ದಕ್ಷಿಣ ಕನ್ನಡ ಜಿಲ್ಲೆಯನ್ನೇ ತೆಗೆದುಕೊಳ್ಳೋಣ. ಎರಡೂ ಜಿಲ್ಲೆಗಳ **Topography** ಸಾಮಾನ್ಯವಾಗಿ ಒಂದೇ ರೀತಿ ಇದೆ. **Climate** ಸಹ ಹಾಗೇ. ಎರಡೂ ಜಿಲ್ಲೆಗಳಲ್ಲಿ ಸಾಕಷ್ಟು ಜನಸಂಖ್ಯೆ ಇದೆಯಲ್ಲದೆ ಸಾಕಷ್ಟು ನೈಸರ್ಗಿಕ ಸಂಪತ್ತಿದೆ. ಅಲ್ಲದೆ ಎರಡೂ ಕಡೆ ಜನರ ಕಿಸೆಯಲ್ಲಿ ಸಾಕಷ್ಟು ಕಾಸಿದೆ. ಅದರೂ ಸಹ ದಕ್ಷಿಣ ಕನ್ನಡದಂತೆ ಉತ್ತರ ಕನ್ನಡದಲ್ಲಿ ಶೈಕ್ಷಣಿಕ ರಂಗದಲ್ಲಿಯೇ ಅಗಲಿ, ವೈದ್ಯಕೀಯ ರಂಗದಲ್ಲಿಯೇ ಅಗಲಿ, ಪತ್ರಿಕಾರಂಗ ಅಥವಾ ಸಂಪರ್ಕ ವ್ಯವಸ್ಥೆಯಲ್ಲಿಯೇ ಆಗಲಿ, ನಾವು ತೀರ ಹಿಂದುಳಿದಿದ್ದೇವೆ. ಏನು ಕಾರಣ?" ಡಾ. ಕಾಮತರು ಯಾವುದೇ ಮುಲಾಜಿಲ್ಲದೆ ಹೇಳಿದರು "ಉತ್ತರ ಕನ್ನಡ ಹಿಂದುಳಿಯಲು ಇಲ್ಲಿಯ ಜನರ ಕಾಲೆಳೆಯುವ ಬುದ್ಧಿ ಕಾರಣ". ಡಾ. ಕಾಮತರು ಜಿಲ್ಲೆಯ ಅಭಿವೃದ್ಧಿ ಕುಂಠಿತವಾಗಲು ಜನರಮೂಲಗುಣ ಧರ್ಮ ಕಾರಣ! ಎಂಬುದನ್ನು ತೋರಿಸಿಕೊಟ್ಟರು. ಯಾವುದೇ

ವಿಷಯದಲ್ಲಿಯೇ ಆಗಲಿ, ತೀರ ಆಳವಾಗಿ ವೈಜ್ಞಾನಿಕ ತಳಹದಿಯ ಮೇಲೆ ಚಿಂತಿಸಿ, ತೀರ ಸರಳವಾಗಿ ನಿರೂಪಿಸುವ ಕಲೆ ಅವರಿಗೆ ಕರಗತವಾಗಿತ್ತು.

ಇನ್ನು ಅವರ ವೈಜ್ಞಾನಿಕ ಸಂಶೋಧನೆಗಳ ಶ್ರೇಷ್ಠತೆ ಎಷ್ಟಿತ್ತು? ಎಂಬುದಕ್ಕೆ ಎರಡು ಉದಾಹರಣೆ. ಒಂದು ಇರುವೆಯ ವರ್ತನೆಗೆ ಸಂಬಂಧಿಸಿದ್ದಾದರೆ, ಇನ್ನೊಂದು ಕಾಗೆಯ ವರ್ತನೆಯದ್ದು.

ಡಾ. ಕಾಮತರು ಪಶ್ಚಿಮ ಬಂಗಾಳದ ಪ್ಲಾಸಿಯಲ್ಲಿ ಇದ್ದಾಗ ಸಹಜ ಕುತೂಹಲದಿಂದ ಇರುವೆಗಳಲ್ಲಿ **Foraging Behavior** (ಸಾಮಾಜಿಕ ವರ್ತನೆಯ) ಬಗ್ಗೆ ಅಧ್ಯಯನ ನಡೆಸಿದರು. ೧೯೯೯ರಲ್ಲಿ ಫ್ರಾನ್ಸ್‌ನ ಇಬ್ಬರು ವಿಜ್ಞಾನಿಗಳು ಅಂತರ್‌ರಾಷ್ಟ್ರೀಯ ವಿಜ್ಞಾನ ನಿಯತಕಾಲಿಕವೊಂದರಲ್ಲಿ ಪ್ರಕಟಿಸಿದ ಲೇಖನದಲ್ಲಿ ಇರುವೆಗಳು ಆಹಾರದ ತಾಣವನ್ನು ತಲುಪಲು ೫ ರಿಂದ ೧೦೦ ಸೆಂ.ಮೀ. ವರೆಗೆ ಧುಮುಕಬಲ್ಲವುದಾಗಿ ತಿಳಿಸಿದ್ದರು. ಡಾ. ಕಾಮತರೂ ಸಹ ಅದಕ್ಕೆ ಸಮವಾದ ಅನೇಕ ವರ್ತನೆಗಳನ್ನು ಇರುವೆಗಳಲ್ಲಿ ದಾಖಲಿಸಿದ್ದಾರೆ. ಸತ್ತ ಇರುವೆಗಳನ್ನು ನೀರಿನಲ್ಲಿ ಸೇತುವೆಯನ್ನಾಗಿಸಿ ಇತರ ಇರುವೆಗಳು ಆಹಾರದ ತಾಣವನ್ನು ತಲುಪುವ ಸಾಮರ್ಥ್ಯ ಹೊಂದಿವೆ! ಎಂಬುದನ್ನು ಅವರು ಸೂಕ್ಷ್ಮ ನಿರೀಕ್ಷಣೆಯಿಂದ ಕಂಡುಕೊಂಡಿದ್ದರು, ಈ ವಿಚಾರದಲ್ಲಿ ಹೆಚ್ಚಿನ ಸಂಶೋಧನೆ ಕೈ ಕೊಂಡಲ್ಲಿ ಅಂಥ ಅಧ್ಯಯನದ ವಿವರಗಳು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಪ್ರಾಣಿವರ್ತನಾ ಶಾಸ್ತ್ರಜ್ಞರ ಗಮನ ಸೆಳೆವಲ್ಲಿ ಸಂಶಯವಿಲ್ಲ.

ಡಾ. ಕಾಮತರು ಕೈಗೊಂಡ ಕಾಗೆಯ ವರ್ತನೆಗಳ ಕುರಿತ ಅಧ್ಯಯನ, ತೀರ ಸ್ವಾರಸ್ಯಕರ ಅಷ್ಟೇ ಅಲ್ಲ ಹೊಸ ಸಿದ್ಧಾಂತಗಳನ್ನು ಹುಟ್ಟು ಹಾಕಬಲ್ಲ ಸಾಮರ್ಥ್ಯವುಳ್ಳದ್ದು.

ಕಾಗೆಗಳು ತಾವು ದಿನನಿತ್ಯ ಕೇಳಿ ಬಲ್ಲ ಭಾಷೆಯ ಧ್ವನಿಯ ಏರಿಳಿತಗಳನ್ನು ಮಾತ್ರವೇ ಗ್ರಹಿಸಿ ಅದಕ್ಕೆ ತಕ್ಕ ನಿರ್ಧಾರವನ್ನು ತೆಗೆದುಕೊಳ್ಳುವ ಸಾಮರ್ಥ್ಯ ಹೊಂದಿವೆ, ಎಂಬುದು, ಡಾ. ಕಾಮತರು ಸ್ವತಃ ಪ್ರಯೋಗ ನಡೆಸಿ ಕಂಡುಕೊಂಡ ವಿಚಾರ, ಕಾಗೆಗಳಲ್ಲಿ ಭಾಷೆಯನ್ನು ಗ್ರಹಿಸುವ ಸಾಮರ್ಥ್ಯದ ಕುರಿತು ಇದೊಂದು ಅಪೂರ್ವ ನಿರೀಕ್ಷಣೆಯಾಗಿದ್ದು ಹೆಚ್ಚಿನ ಸಂಶೋಧನೆ ನಡೆಸಿದಲ್ಲಿ ಅದಕ್ಕೆ ಖ್ಯಾತ ಪ್ರಾಣಿಶಾಸ್ತ್ರಜ್ಞೆ ಜೇನ್ ಗುಡಾಲ್, ಚಿಂಪಾಂಝಿಗಳಲ್ಲಿ ಅವುಗಳು ಉಪಕರಣಗಳನ್ನು ಬಳಸುವ ವಿಧಾನ ಕುರಿತು ಕೈಕೊಂಡ ಅಧ್ಯಯನಕ್ಕೆ ಇರುವಷ್ಟೇ ಮಹತ್ವ ಪಡೆದುಕೊಳ್ಳುವ ಎಲ್ಲ ಸಾಮರ್ಥ್ಯ ಇದ್ದೇ ಇದೆ.

ಕಾಮತರ ಈ ಎರಡು ಶೋಧಗಳು ನಾವು ದಿನನಿತ್ಯ ನೋಡುವ ತೀರ ಸಾಮಾನ್ಯ ಜೀವಿಗಳು ಎಂದು ಪರಿಗಣಿಸಿದವುಗಳೂ ಸಹ ಎಷ್ಟು ಬುದ್ಧಿಮತ್ತೆ ಹೊಂದಿವೆ, ಎಂಬುದನ್ನು ಸಾಧಿಸಿ ತೋರಿಸಲು ಬಂದೀತು!

ಜೀವ ಜಾಲದ ಅಧ್ಯಯನಕ್ಕೆ ಸಾಕಷ್ಟು ಶ್ರಮ ಪಟ್ಟು. ದೇಶದ ಹಲಭಾಗಗಳನ್ನು ಸುತ್ತಾಡಿದ ಡಾ. ಕಾಮತರು, ನಮ್ಮ ಕಾಮತರು ಎಂಬ ಪ್ರೀತಿ, ಹೊಗಳಿಕೆಗಳು ಬೇಕು. ಆದರೆ ಅಷ್ಟು ಮಾತ್ರ ಸಾಕೇ? ಡಾ. ಕಾಮತರ ಆದರ್ಶಮಯ ಜೀವನವನ್ನು ಹಾಡಿ ಹೊಗಳುವದರಲ್ಲೇ ತೃಪ್ತರಾಗುವದಕ್ಕಿಂತ ಮಿಗಿಲಾಗಿ ಅವರ ಶಿಸ್ತುಬದ್ಧ ನಡೆವಳಿಕೆಯನ್ನಾಗಲೀ, ವೈಜ್ಞಾನಿಕ ದೃಷ್ಟಿಕೋನವನ್ನಾಗಲೀ ತಾಳ್ಮೆಯಿಂದ ಕೂಡಿದ ವರ್ತನೆಯನ್ನಾಗಲೀ ಸ್ವಲ್ಪ ಮಟ್ಟಿಗಾದರೂ ನಮ್ಮ ಜೀವನದಲ್ಲಿಯೂ ಅಳವಡಿಸಿಕೊಳ್ಳಲಿಕ್ಕೆ ಕಲಿತರೆ, ಅದು, ನಾವು ಡಾ. ಕೃಷ್ಣಾನಂದ ಕಾಮತರಿಗೆ ಸಲ್ಲಿಸುವ ನಿಜವಾದ ಗೌರವವಾದೀತು.

# ಉಕ್ಕಿ ಬಂದ ನೆನಪು

*- ಎಂ.ಜೆ. ರಾಜೀವಗೌಡ*

**ಪ್ರ**ತಿಯೊಬ್ಬರ ಜೀವನದಲ್ಲೂ ಸಾಧ್ಯವಿರಬಹುದಾದ ಅಸಂಖ್ಯಾತ ರೋಮಾಂಚಕ ಘಟನೆಗಳಲ್ಲಿ, ಈ ಎರಡು ಸಾಧ್ಯತೆಗಳೂ ಇರುತ್ತವೆ. ಒಂದು - ನಮ್ಮ ನಡುವೆ ಮಾಮೂಲಿಯಾಗಿ ಬದುಕುತ್ತಿದ್ದ ವ್ಯಕ್ತಿ, ಮುಂದೆಂದೋ ಒಂದು ದಿನ ಅದ್ಭುತ ಸಾಧನೆಗಳನ್ನು ಮಾಡಿ ದಿಡೀರನೇ ಇನ್ನೆಲ್ಲೋ ಭೇಟಿಯಾಗಬಹುದು. ಇದು ಒಂಥರ ಥ್ರಿಲ್. ಎರಡು - ನಾವು ಎಂದೋ... ಎಲ್ಲೋ... ಭೇಟಿಯಾಗಿದ್ದ ವ್ಯಕ್ತಿಯೊಬ್ಬರು, ಅದಾಗಲೇ ಉನ್ನತ ಸಾಧನೆಗೈದ ವ್ಯಕ್ತಿಯಾಗಿದ್ದರೆಂಬುದು ಮುಂದೆಂದೋ ಒಂದು ದಿನ ಇದ್ದಕ್ಕಿದ್ದಂತೆ ನಮಗೆ ತಿಳಿಯಬಹುದು. ಆಗಲೂ ಒಂಥರಾ ಥ್ರಿಲ್ ಆದರೂ, ಆ ಕ್ಷಣ ನಾವು ಮೌನಿಗಳಾಗಿಬಿಡುತ್ತೇವೆ. ಬಹುಶಃ ಒಂದು ಚೂರು ಅಹಂ ಪ್ರದರ್ಶಿಸದೆ ನಾವೂ ನಿಮ್ಮಷ್ಟೇ ಸಾಧಾರಣ ಮನುಷ್ಯರು! ಎಂಬಂತೆ ಸರಳವಾಗಿ ವರ್ತಿಸಿದ್ದ ಅಂತಹವರ ದೊಡ್ಡತನ ನಮ್ಮ ಮಾತುಗಳನ್ನು ಮರೆಸಿಬಿಟ್ಟಿರುತ್ತದೇನೋ...?

"ಕಮ್ಮಟಿಗ" ಬಿಡುಗಡೆಯ ಸಮಾರಂಭದಲ್ಲೂ ನನಗಾದದ್ದು ಈ ಎರಡನೆಯ ರೀತಿಯ ಅನುಭವವೇ...! ಆ ಕಾರ್ಯಕ್ರಮದಲ್ಲಿ "ಕಮ್ಮಟಿಗ" ಪುಸ್ತಕದ ಪುಟ ತಿರುವುತ್ತಿದ್ದ ನನಗೆ, "ಸೈಂಟಿಫಿಕ್ ಫೋಟೋ ಲ್ಯಾಬ್" ನ ಮುಚ್ಚಿದ ಬಾಗಿಲು ಮುಂದೆ ತಿಳಿ ನಗೆಯೊಂದಿಗೆ ಕೈಚೀಲ ಬೆನ್ನಿಗಾಕಿಕೊಂಡು ನಿಂತ ಕಾಮತರ ಫೋಟೋ ನೋಡಿದ ಕೂಡಲೆ "ಅರೆ... ಇವರು...!" ಇವರೇನಾ ಕೃಷ್ಣಾನಂದ ಕಾಮತರು...!?" ಅಂತನ್ನಿಸಿತು. ಯಾಕೆ ಗೊತ್ತಾ... ಅದುವರೆವಿಗೂ ಗೆಳೆಯ ಮಲ್ಲಿಕಾರ್ಜುನರ ಮುಖಾಂತರ ಕಾಮತರ ಬಗ್ಗೆ ಕೇಳುತ್ತಿದ್ದೆ. ಅವರ ಫೋಟೋಗ್ರಾಫಿ, ಪುಸ್ತಕಗಳು, ಪ್ರವಾಸ ಕಥನಗಳು... ಇತ್ಯಾದಿಗಳ ಬಗ್ಗೆ ಹೇಳುತ್ತಿದ್ದ ಮಲ್ಲಿಕಾರ್ಜುನ್ ಕೊನೆಗೂ ಅವರನ್ನು ನೇರ ಭೇಟಿಯಾಗದೆ ಹೋದದ್ದಕ್ಕಾಗಿ ಪೇಚಾಡುತ್ತಿದ್ದರು. (ಈಗಲೂ ಪೇಚಾಡುತ್ತಿರುತ್ತಾರೆ...)

ಆ ಫೋಟೋ ನೋಡಿದ ಕೂಡಲೆ ನನಗೆ ೧೯೯೨-೯೩ರ ಸುಮಾರಿನಲ್ಲಿ ಅವರನ್ನು ಭೇಟಿ ಮಾಡಿದ್ದ ಕ್ಷಣಗಳು ನೆನಪಿಗೆ ಬಂದವು. ನನ್ನ ಮಿತ್ರನೊಬ್ಬ ರೇಷ್ಮೆ ಕೃಷಿ ವಿಜ್ಞಾನದಲ್ಲಿ ಎಂ.ಎಸ್.ಸಿ. ಮಾಡಿದ್ದು, ಜ್ಞಾನ ಭಾರತಿಯಲ್ಲಿ ಪಿಹೆಚ್.ಡಿ., ಮಾಡುತ್ತಿದ್ದ. ಹೂಜಿ ನೊಣಗಳಿಗೆ ಸಂಬಂಧಿಸಿದಂತೆ ಸಂಶೋಧನೆ ಮಾಡುತ್ತಿದ್ದ ಅವನಿಗೆ, ಅದಕ್ಕೆ ಬೇಕಿದ್ದ ಕೆಲವು ಫೋಟೋಗಳನ್ನು ಲ್ಯಾಬ್‌ನಲ್ಲೇ ತೆಗೆಯಬೇಕಿತ್ತಂತೆ. ಆಗ್ಗೆ ನಾನು ತೆಗೆದಿದ್ದ ಕೆಲವು ಫೋಟೋಗಳು ತುಂಬಾ ಅದ್ಭುತ ಎಂಬ ಭ್ರಮೆಯಲ್ಲಿದ್ದೆ. ಫೋಟೋಗ್ರಾಫಿಕ್ಸ್‌ಯಲ್ಲಿ ನನ್ನಷ್ಟೂ ಜ್ಞಾನ ಇಲ್ಲದಿದ್ದ ನನ್ನ ಗೆಳೆಯನಿಗೂ ನಾನೊಬ್ಬ ಅದ್ಭುತ ಫೋಟೋಗ್ರಾಫರ್ ಎನ್ನಿಸಿತ್ತೋ. ಏನೋ... ಅವನಿಗೆ ಬೇಕಿದ್ದ ಕೆಲವು ಫೋಟೋಗಳನ್ನು ತೆಗೆದುಕೊಡುವಂತೆ ನನ್ನನ್ನು ಕೇಳಿದ. ಆಯಿತು, ಅಂತ ಒಪ್ಪಿಕೊಂಡ ನಾನು ಒಂದು ದಿನ ಅವನ ಲ್ಯಾಬಿಗೆ ಹೋಗಿ, ಇಡೀ ರಾತ್ರಿ ನಿದ್ದೆಗೆಟ್ಟು ಅವನು ಗಾಜಿನ ಟ್ರೇಗಳಲ್ಲಿ ಬೆಳೆಸಿದ್ದ ಪೆನ್ಸಿಲಿನಂತೆ ಉದ್ದಕ್ಕಿದ್ದ, ಆದರೆ ಮೃದುವಾಗಿ ಬಾಗಿ ಬಳುಕುತ್ತಿದ್ದ (ಅವನು ಅದನ್ನು "ಜೆಲ್" ಅಂತ ಕರೀತಿದ್ದ.) ಎಂಥದೋ ವಸ್ತುಗಳನ್ನು ಫೋಟೋ ತೆಗೆದೆ. ಬೆಳಗ್ಗೆ ಅವನ್ನೆಲ್ಲಾ ಪ್ರಿಂಟ್ ಹಾಕಿಸಿ ನೋಡಿದ ಮೇಲೆ ನನ್ನ ಸ್ನೇಹಿತನ ಮೋರೆ ಪೆಚ್ಚಾಯಿತು. ಆ ಜೆಲ್‌ಗಳ ಮಧ್ಯೆ ಮಧ್ಯೆ ಕೆಲವು ಬಣ್ಣ ಬಣ್ಣದ ಪಟ್ಟಿಗಳಿರುತ್ತವೆ. ಅವು ಸ್ಪಷ್ಟವಾಗಿ ಚಿತ್ರದಲ್ಲಿ ಮೂಡಬೇಕಂತೆ. ನಾನು ತೆಗೆದಿದ್ದ ಫೋಟೋಗಳಲ್ಲಿ ಅಷ್ಟೊಂದು ವಿವರಗಳು ಇರಲಿಲ್ಲ. ಆ ರೀತಿಯ ಸ್ಪಷ್ಟ ಚಿತ್ರ ತೆಗೆಯಲು **Macrolens** (ಮ್ಯಾಕ್ರೊಲೆನ್ಸ್) ಬೇಕಿತ್ತು. ಅಂತಹ ಲೆನ್ಸ್ ನನ್ನಂತಹ ಪ್ರಾಥಮಿಕ ಶಾಲಾ ಶಿಕ್ಷಕನಿಗೆ ಎಟುಕುವಂತದ್ದಲ್ಲ! ಎಂಬದು ನನಗೆ ಗೊತ್ತಿತ್ತು.

ಕೊನೆಗೆ ನನ್ನ ಸ್ನೇಹಿತನ ಸ್ನೇಹಿತರೊಬ್ಬರು : ಇಂತಹ ಫೋಟೋಗಳನ್ನು ತೆಗೆಯೋರು ಒಬ್ರು ಮಲ್ಲೇಶ್ವರದಲ್ಲಿದ್ದಾರೆ, ಅಂತ ಒಂದು ಅಡ್ರಸ್ ಕೊಟ್ಟರು. ಸುಮ್ಮನೆ ಊರಿಗೆ ವಾಪಸ್ಸಾಗುತ್ತಿದ್ದ ನನ್ನನ್ನೂ ಕರೆದುಕೊಂಡು ಹೋಗಲು ನನ್ನ ಸ್ನೇಹಿತ ಇಚ್ಛಿಸಿದಾಗ, ಸರಿ ಎಂದು ಅವನೊಟ್ಟಿಗೆ ಅಲ್ಲಿಗೆ ಹೋದೆ.

"ಸೈಂಟಿಫಿಕ್ ಮತ್ತು ಫೋಟೋ ಲ್ಯಾಬ್" ಎಂಬ ಮಾಸಲು ಬೋರ್ಡಿನ ಆ ಅಂಗಡಿಯೊಳಗೆ ಟೇಬಲಿನ ಮೇಲೆ ಹರಡಿದ್ದ ರಾಶಿ, ರಾಶಿ ಫೋಟೋಗಳೊಳಗಿಂದ ಅಮೂಲ್ಯವಾದದ್ದೇನೋ ಒಂದನ್ನು ಹುಡುಕುತ್ತಿದ್ದಂತೆ ಕಂಡ ವ್ಯಕ್ತಿಯೊಬ್ಬರು ನಮ್ಮನ್ನು ಕಂಡೊಡನೆ, ನಗುಮುಖದಿಂದ "ಕೂತ್ಕೊಳ್ಳಿ" ಎಂದರು. ಒಂದೆರೆಡೇ ನಿಮಿಷದಲ್ಲಿ ಅವರು ಹುಡುಕುತ್ತಿದ್ದೇನೋ ಸಿಕ್ಕ ತೃಪ್ತ ಭಾವದೊಂದಿಗೆ ನಮ್ಮ ಕಡೆ ತಿರುಗಿದರು. ನನ್ನ ಸ್ನೇಹಿತ ಎಲ್ಲಾ ವಿವರಗಳನ್ನು ತಿಳಿಸಿ, ಫೋಟೋ ತೆಗೆದುಕೊಡುವಂತೆ ಕೇಳಿ

"ದುಡ್ಡು ಎಷ್ಟಾಗಬಹುದು ಸಾರ್" ಎಂದ. ಅವರು ಆ ಪ್ರಶ್ನೆಗೆ ಉತ್ತರಿಸದೆ, ನನ್ನ ಕಡೆ ತಿರುಗಿ "ಎಲ್ಲಿ ನಿಮ್ಮ ಕ್ಯಾಮರಾ ಕೊಡಿ" ಎಂದರು. ನನ್ನ ಕ್ಯಾಮರಾ ನೋಡಿದ ನಂತರ "ನೋಡಿ ಈ ಲೆನ್ಸನ್ನು ಹೀಗೆ ಹಿಂದು ಮುಂದು ಮಾಡಿ ಇದೇ ಕ್ಯಾಮರಾದ ಬಾಡಿಗೆ ಜೋಡಿಸಿದರೆ, ಇದೇ **Macrolens** (ಮ್ಯಾಕ್ರೊಲೆನ್ಸ್)ಗಿಂತ ಹೆಚ್ಚು ಕೆಲಸ ಮಾಡುತ್ತದೆ. ಇದಕ್ಕೆ ಬೇಕಾದ **Convertor** (ಕನ್ವರ್ಟರ್) ಕೇವಲ ೨೦೦ ರೂಪಾಯಿಗೆ ಸಿಗುತ್ತೆ. ಇದರಿಂದ ನೀವೆ ಫೋಟೋಗ್ರಾಫ್ ಮಾಡಿ. ಯೋಚಿಸಬೇಡಿ. ಫೋಟೋಗಳು ನಿಮ್ಮ ನಿರೀಕ್ಷೆಯಂತೆ ಬರುತ್ತವೆ. ಅಕಸ್ಮಾತ್ ಆಗಲಿಲ್ಲ ಅಂದ್ರೆ... ಆ ಮೇಲೆ ನಾನೇ ಮಾಡಿಕೊಡ್ತೇನೆ..." ಎಂದರು. ಜೊತೆಗೆ **Convertor** (ಆ ಕನ್ವರ್ಟರ್) ಸಿಗುವ ಅಂಗಡಿಯ ವಿಳಾಸವನ್ನು ಕೊಟ್ಟರು.

ಅವರ ಸಲಹೆಯಂತೆ ಮಾಡಿ ಫೋಟೋ ತೆಗೆದಾಗ, ಅವು ನನ್ನ ಸ್ನೇಹಿತನ ಪ್ರಕಾರ ಅವನ ನಿರೀಕ್ಷೆಗಿಂತ ಚೆನ್ನಾಗಿ ಮೂಡಿದ್ದವಂತೆ...! ಸರಿ ಆ ಫೋಟೋಗಳನ್ನು ತೆಗೆದುಕೊಂಡು ಆ ಲ್ಯಾಬ್‌ನ ವ್ಯಕ್ತಿಗೆ ತೋರಿಸಿ ಬರೋಣವೆಂದು ನಾವು ಮಾರನೆ ದಿನ ಅಲ್ಲಿಗೆ ಹೋದ ಸಮಯಕ್ಕೆ ಅವರಿನ್ನೂ ಲ್ಯಾಬಿಗೆ ಬಂದಿರಲಿಲ್ಲ. ನಾನು ಊರಿಗೆ ವಾಪಸ್ಸು ಬಂದು ಬಿಟ್ಟೆ. ನನ್ನ ಸ್ನೇಹಿತ ಆಮೇಲೆ ಇನ್ನೊಂದು ದಿನ ಹೋಗಿ ಅವರಿಗೆ ಆ ಫೋಟೋಗಳನ್ನೆಲ್ಲಾ ತೋರಿಸಿ ಬಂದನಂತೆ. ಅವರು "ತುಂಬಾ ಚೆನ್ನಾಗಿವೆ" ಅಂತ ಸಂತೋಷಪಟ್ಟರೆಂದು ಮುಂದೊಂದು ದಿನ ನನ್ನ ಸ್ನೇಹಿತ ಹೇಳಿದ.

"ಕಮ್ಮಟಿಗ" ದಲ್ಲಿ ಆ ಚಿತ್ರ ನೋಡಿದ ಕೂಡಲೇ ಇದೆಲ್ಲಾ ನನ್ನ ನೆನಪಿಗೆ ಬರಲು ಕಾರಣವೇನೆಂದರೆ ನಾನಂದು ಭೇಟಿ ಮಾಡಿದ್ದ ಆ ವ್ಯಕ್ತಿಯೇ ಈ ಕೃಷ್ಣಾನಂದ ಕಾಮತರು...!

ಬೆಂಗಳೂರಿನಲ್ಲಿ ನನಗೆ ಗೊತ್ತಿರುವಂತೆ ಈ ರೀತಿ ವೈಜ್ಞಾನಿಕ ಛಾಯಾಗ್ರಹಣ ಮಾಡುವವರು ಗ್ರಾಹಕರನ್ನು ಕತ್ತಲಲ್ಲಿಟ್ಟು ಸಿಕ್ಕಾಪಟ್ಟೆ ಹಣ ಪಡೆಯುತ್ತಾರೆ. ಅಂತಹದರಲ್ಲಿ ಒಂದು ಅಮೂಲ್ಯವಾದ ತಂತ್ರವನ್ನೇ ಎಷ್ಟೊಂದು ಸುಲಭವಾಗಿ ಇನ್ನೊಬ್ಬರಿಗೆ ತಿಳಿಸಿಕೊಡುತ್ತಾರಲ್ಲ ಇವರು... ಇದು ಕಾಮತರಿಗೆ ಮಾತ್ರ ಸಾಧ್ಯವಿದ್ದಂತಹ ಗುಣವೇನೋ...., ತನ್ನಲ್ಲಿನ ಬೆಳಕನ್ನು ಇತರರಿಗೂ ಹಂಚುವ ಸ್ವಭಾವ ಅವರದು.

"ನೋಡ್ರಿ... ನೀವು ಕಾಣದ ಗುರುವಿನ ತುಂಬಾ ಹಳೆಯ ಆಕಸ್ಮಿಕ ಶಿಷ್ಯ ನಾನು" ಅಂತ ಮಲ್ಲಿಕಾರ್ಜುನರಿಗೆ ಹೇಳಿದರೆ, ಅವರು "ಅಯ್ಯೋ! ನನಗೆ ಸಾಧ್ಯವಾಗಲಿಲ್ಲವೆ!" ಅಂತ ಈಗಲೂ ಪೇಚಾಡುತ್ತಿರುತ್ತಾರೆ.

ಬರಿದಾಗು ಬರಿದಾಗು... ನೀ ತುಂಬುವೆ,
ಪುರಾತನನಾಗು ಪುರಾತನನಾಗು... ನೀ ಪುನರ್ನವವಾಗುವೆ,
ಬಗ್ಗು ಬಗ್ಗು... ನೀ ನೇರವಾಗುವೆ,
ಕೊಡು ಕೊಡು... ನೀ ತೆಗೆದುಕೊಳ್ಳುವೆ,
ಮೌನವಾಗು ಮೌನವಾಗು... ನೀ ಹೆಚ್ಚು ಮಾತನಾಡುವೆ,
ಬಿಡು ಬಿಡು... ನೀ ಪೂರ್ಣವಾಗುವೆ.

ಕಾಮತರನ್ನು ನೆನೆದಾಗಲೆಲ್ಲಾ "ತಾವೋ" ನ ಈ ಸಾಲುಗಳು ನೆನಪಿಗೆ ಬರುತ್ತವೆ.

# ಕಾಮತ 'ಪೋರಿ' ಮತ್ತು ನನ್ನ ಪ್ರೇಮ ಸಂಬಂಧ

*- ಡಾ. ಶ್ರೀವತ್ಸ ದೇಸಾಯಿ*

ಇದೊಂದು ಬಾದರಾಯಣ ಸಂಬಂಧ ಎನ್ನಬಹುದು! ಮುಂದೆ ಓದಿ ನೀವೇ ತೀರ್ಪು ಕೊಡಿ.

## ಶಬ್ದ ಪರಿಚಯ

ಕಾಲೇಜಿನಲ್ಲಿದ್ದಾಗ ನನ್ನ ಮಿತ್ರ ವಿಷ್ಣು ನನಗೆ ಪೋರಿಯ ಪರಿಚಯ ಮಾಡಿಸಿದ. ಯಾರವಳು ಅದೃಷ್ಟವಂತೆ! ಎಂದು ನೀವು ಕೇಳುವ ಮೊದಲೇ ನಾನೇ ಬಿಡಿಸಿ ಹೇಳಿಬಿಡುತ್ತೇನೆ. ಪರಿಚಯವಾದದ್ದು ಪೋರಿ ಶಬ್ದವೇ ಹೊರತು ಯಾವ ಬಿಂಕದ ಕಾಲೇಜು ತರುಣಿಯಲ್ಲ. ಹುಡುಗ-ಹುಡಿಗಿಯರಿಗೆ ಘಟ್ಟದ ಕೆಳಗಿನವರು ಪೋರ-ಪೋರಿಯೆಂದು ಕರೆಯುತ್ತಾರೆಂದು ತಿಳಿಸಿ ಹೇಳಿದ ಹೊನ್ನಾವರದ ನನ್ನ ಮಿತ್ರ. ಹೊನ್ನಾವರದವರಿಗೂ ಪೋರಿಗೂ ನಿಕಟಸಂಬಂಧವೇನೋ! ನಾನು ಹಾಗೇ ಅಂದುಕೊಂಡೆ, ಅದೇ ಊರಲ್ಲಿ ಬೆಳೆದ ಕೃಷ್ಣಾನಂದ ಕಾಮತರ ವೆಬ್ ಸೈಟನ್ನು ನೋಡಿ. ಅದು ಬರೀ ಪೋರಿಯಲ್ಲ! ಮಹಾ, ಪೋರಿಯಂತೆ, ಕಾಮತ್ ಪೊ ಪೋರಿ (**pot pourri** ಅಥವಾ ಪೂರಿ ಎನ್ನಿ) ಎಂದು ಜಯಭೇರಿ ಹೊಡೆಯುತ್ತಿದೆ! ಅದಕ್ಕೆ ತಿಂಗಳಿಗೆ ಮೂರು ದಶಲಕ್ಷ ಸಂದರ್ಶಕರೆಂದು ಕೇಳಿದೆ. ಇದೇನು ಸಾಮಾನ್ಯ ಮಾತಲ್ಲ.

## ಯಾತರದ ಹೂವಾದರೇಂ, ಕೆಸರಿನ ಕಮಲವಾದರೇಂ...

**Potpourri** ಫ್ರೆಂಚ್ ಶಬ್ದವಂತೆ. ಸುಗಂಧಯುಕ್ತ ಪಕಳೆಗಳನ್ನು ಕೂಡಿಟ್ಟ ಕುಡಿಕೆ ಅದು. ಅದರ ಮೂಲ ಲ್ಯಾಟಿನ್ನಿನ ಶಬ್ದ. ತರ್ಜುಮೆ ಮಾಡಿದರೆ ಕೊಳೆಯುತ್ತಿರುವ ವಸ್ತುಗಳಿದ್ದ ಮಡಕೆ ಎಂದು. ಇತ್ತಿತ್ತಲಾಗಿ ಅದನ್ನು ನಾನಾ ವಿಧ ಆಹಾರ ಪದಾರ್ಥಗಳ 'ಮಿಸಳ' ವೆಂಬ ಅರ್ಥದಲ್ಲೂ ವಿವಿಧ ಸ್ವರಗಳಸಂಗಮವೆನ್ನುವ

ಅರ್ಥದಲ್ಲೂ ಆ ಪದಗುಚ್ಛವನ್ನು ಬಳಸುತ್ತಾರೆ. ಅಂದಮೇಲೆ ಈ ವೆಬ್ ಸೈಟನ್ನು ಕಲಸುಮೇಲೋಗರವೆಂದಾಗಲಿ ರಾಗಮಾಲಿಕೆಯೆಂದಾದರೂ ಕರೆದರೂ ಅಡ್ಡಿಯಿಲ್ಲ. ಇಲ್ಲ, ಘಮಘಮಿಸುವ ಅತ್ತರದಾನಿ. ಸರ್ವಜ್ಞ ಕವಿ ಹಾಡಿದಂತೆ, ಯಾತರದ ಹೂವಾಗಲಿ, ನಾತರದು ಸಾಲದೆ?

## ಅಂತರ್ಜಾಲ-ಮಾಯಾಜಾಲ

ಭಾರತಕ್ಕೆ ಸ್ವಾತಂತ್ರ್ಯ ಸಿಗುತ್ತಿದ್ದಂತೆ ಹುಟ್ಟಿದ ನನಗೆ ಈ ಕಂಪ್ಯೂಟರ ದಾಸ್ಯದಿಂದ ಅದು ಹೇಗೋ ಪಾರಾಗಿ ನನ್ನ ಜೀವನದ ಉತ್ತರಾರ್ಧ ಕಳೆದರಾಯಿತು! ಎಂದು ತಿಳಿದಿದ್ದೆ. "ನಿನ್ನ ಕೈಯಲ್ಲಿ ಕಲಿಯೋದು ಆಗೊಲ್ಲ" ಎಂದು ಮಕ್ಕಳು ನನ್ನನ್ನು ಹಂಗಿಸಿದಾಗ ಛಲಕ್ಕೆ ಬಿದ್ದು ಗಣಕಯಂತ್ರ ಕಲೆ ಕಲಿಯಲೇ ಬೇಕಾಯಿತು! ಕಲಿತೊಡನೆ ಇಂಟರ್ನೆಟ್ಟಿನ ಮಾಯಾಜಾಲದಲ್ಲಿ ಸೆರೆ ಬಿದ್ದೆ. ಲೀಲಾಜಾಲವಾಗಿ ಅಂತರ್ಜಾಲದಲ್ಲಿ 'ಸರ್ಫ್' (**Surf**) ಮಡುತ್ತಿದ್ದಾಗ, ಒಂದು ದಿನ 'ಕಾಮತ ಪೊಪೋರಿ' ಕಣ್ಣಿಗೆ ಬಿತ್ತು. ಅದೇನೋ 'ಲವ್ ಆಟ್ ಫಸ್ಟ್ ಸೈಟ್' ಅಂದ ಹಾಗೆ ಅದರ ಆಕರ್ಷಣಕ್ಕೆ ಬಲಿಯಾದೆ. "ಬಾನ್ತುಂಬ ವೆಬ್ಬುಗಳ ಸಂತೆ, ಮನೆ ತುಂಬ ಮುದ್ರಿಸಿ ಚೆಲ್ಲಿದ ಕಾಗದಗಳ ಕಂತೆ" ಎಂದು ಕವನ ಮಾಡಿದ ನನಗೆ ಶುಭ್ರವಾಗಿ ಬಿಳಿಯುಟ್ಟ ಕುವರಿಯಂತೆ ಕಾಮತ ಪೊಪೋರಿ ಅಂದವಾಗಿ ಕಂಡಳು. ಅವಳ ಕೈಯಲ್ಲಿ ಬಿಳಿಬಟ್ಟೆ ಹೊದಿಸಿದ ತರತರಹದ ಮಿಠಾಯಿಗಳ ತಟ್ಟೆ. ಎಷ್ಟೊಂದು ಸ್ವಾದಿಷ್ಟ ವಿಷಯಗಳು ಅದರ ಪದರು - ಪದರುಗಳೊಳಗೆ ಹುದುಗಿವೆ! ಇನ್ನು ಒಳಗಿಣಿಕಿ ನೋಡಿದಾಗ ನನ್ನ ಪಾಲಿಗೆ ಸಕ್ಕರೆಯ ಗಣಿಯಾಗಿ ಕಂಡದ್ದು ಅವರ ಚಿತ್ರಗಳ ಖಜಾನೆ.

## ನನ್ನ ಮತವೇ ಕಾ-ಮತ...

'ಹರಿಯ ಮತವೇ ನನ್ನ ಮತವು' ಎಂದು ದಾಸರು ಹಾಡಿದರು. ಮನುಷ್ಯನಿಗೆ ಕೆಲ ವಿಷಯಗಳು ಮೊದಲು ಹವ್ಯಾಸವಾಗಿ ಪ್ರಾರಂಭವಾಗಿ ಬರುಬರುತ್ತ ಜೀವನದ ಪ್ರತಿಕ್ಷಣವನ್ನೂ ಆಕ್ರಮಿಸಿಕೊಂಡು ಜೀವನಧರ್ಮವೇ ಆಗಿಬಿಡುತ್ತದೆ. ನನಗೂ ಕಾಮತರಂತೆ ಫೊಟೋಗ್ರಾಫಿಯ ಹುಚ್ಚು. ಅವರ ಸಂಗ್ರಹ ನೋಡಿದರೆ ಅದರ ಮಹತ್ವ ಗೊತ್ತಾಗುತ್ತದೆ. ಅವರ ಅಪ್ರತಿಮ ಛಾಯಾಚಿತ್ರಕಲೆಗೆ ನಾನು ಮಾರು ಹೋಗಿದ್ದೇನೆ.

## ಕಾಡಿಯೋ ಬೇಡಿಯೋ ಕಡ ತಂದೋ...

ಕವಿವರ್ಯ ವಿನಾಯಕ ಗೋಕಾಕರು ಕಾಮತರು ಕರ್ನಾಟಕ ಕಾಲೇಜಿನಲ್ಲಿದ್ದ ಕಾಲಕ್ಕೆ ಪ್ರಿನ್ಸಿಪಾಲರಾಗಿರಲು ಸಾಕು ಅಂತ ಕಾಣುತ್ತೆ. ಅವರ ಒಂದು ಪದ್ಯದ ಸಾಲುಗಳು 'ಕಾಡಿಯೋ ಬೇಡಿಯೋ ತಂದೆನೊಂದು ರೇಡಿಯೋ'. ಅಂತೆಯೇ

ತಮ್ಮದೇ ಒಂದು ಕ್ಯಾಮರಾ ಕೊಳ್ಳಲಾರದೆ ಅವರಿವರ 'ಬಿಟ್ಟಿ' ಕ್ಯಾಮರಾದಲ್ಲೇ ಚಂದವಾಗಿ ಅಂದವಾಗಿ ಫೋಟೋ ತೆಗೆಯುತ್ತ ಮಿತ್ರರಿಂದ ಭೇಷ್ ಅನಿಸಿಕೊಂಡು, ಕಷ್ಟಪಟ್ಟು ಕೊನೆಗೂ ತಮಗಾಗಿಯೇ ಒಂದನ್ನು ದೊರಕಿಸಿದ ವಿಷಯವನ್ನು ರಸವತ್ತಾಗಿ ಬರೆದಿದ್ದಾರೆ, ತಮ್ಮ ಚಿರಂಜೀವ ವಿಕಾಸನಿಗೆ ಒಂದು ಪತ್ರದಲ್ಲಿ. ಆ ಕಲೆಯನ್ನು ಚೆನ್ನಾಗಿ ಕರಗತ ಮಾಡಿದ ಸಾಫಲ್ಯವನ್ನು 'ಪೊಫೋರಿಯ' ಅಸಂಖ್ಯ ಪುಟಗಳಲ್ಲಿ ಕಾಣಬಹುದು.

## ಟಿಪಿಕಲ್ ಉತ್ತರ ನೆಗೆಟಿವ್ವಿನಲ್ಲಿ!

ಮೇಲೆ ಉಲ್ಲೇಖಿಸಿದ ಪತ್ರದಲ್ಲಿ ತಾವು ಫೋಟೋ 'ಡಿವೆಲಪಿಂಗ ಮತ್ತು ಪ್ರಿಂಟಿಂಗ' ಕಲಿಯಲೆಂದು ಧಾರವಾಡ ಸುಭಾಸ ರೋಡಿನ ಸ್ಟೂಡಿಯೋಗಳ ಪ್ರದಕ್ಷಿಣೆ ಮಾಡಿದ ವಿಚಾರ ಹೇಳುತ್ತಾರೆ. ನಾನು ಸಹ ವಿಜಯ, ರಾಜಕಮಲ ಸ್ಟೂಡಿಯೋಗಳಿಗೆ ಅದೇ ಉದ್ದೇಶದಿಂದ ಹೋದದ್ದುಂಟು. ನಾನು ಏದುಸಿರು ಬಿಡುತ್ತ ಅಟ್ಟದ ಮೇಲಿನ ಸ್ಟೂಡಿಯೋ ಮೆಟ್ಟಲು ಹತ್ತುತ್ತಿದ್ದಾಗ ಕೆಳಗಿಳಿದು ಬರುತ್ತಿದ್ದ ಚಿಗುರು ಮೀಸೆಯ ಆ ಯುವಕನೇ ಕಾಮತರಾಗಿರಬಹುದೇನೋ ಎಂದು ಸೋಜಿಗಪಟ್ಟಿದ್ದೇನೆ! ಕಾಲೇಜಿಗೆ ಹೊಸದಾಗಿ ಹೆಸರು ಹಚ್ಚಿದಾಗ ಪಾಸ್‌ಪೋರ್ಟ್ ಫೋಟೋ ತೆಗೆಸುವ ಸಂಭ್ರಮ. ಫೋಟೋ ತೆಗೆಸಿ ನಂತರ ಕೆಲ ದಿನಗಳಾದ ಮೇಲೆ ಪ್ರಿಂಟು ತರಲು ಹೋದಾಗ ಕೋಣೆಯ ಒಂದು ತುದಿಯಲ್ಲಿ ತೊಳೆದು ಸಾಲುಸಾಲಾಗಿ ತೂಗು ಹಾಕಿದ ನೆಗಟಿವ್ಹುಗಳ ಮೇಲೆಲ್ಲಾ ಯಾಕೆ ಕೆಂಪು ಮಸಿ ಬಳಿದಿಟ್ಟಿದ್ದಾರೆ ಎಂದು ಆಗ ಅರ್ಥವಾಗಿರಲಿಲ್ಲ. 'ಕರ್‍ರಗಿನವರನ್ನು ಬೆಳ್ಳಗೆ ಮಾಡಬಹುದೇನೋ?' ಎಂದು ಪ್ರಶ್ನೆ ಕೇಳಿದಾಗ ಸಹಜವಾದ ಉತ್ತರ "ಇಲ್ಲ" ಎಂದೇ. **Typical ass** ಎಂದು ಚೇಷ್ಟೆ ಮಾಡಿಸಿಕೊಂಡ ಟಿ.ಪಿ. ಕೈಲಾಸಂರ 'ಬಂಡವಾಳವಿಲ್ಲದ ಬಡಾಯಿ' ಯಲ್ಲಿ ಅವರು ಕೊಡುವ ಉತ್ತರ : **The answer is in the negative**! ನಿಮ್ಮ ಪ್ರಶ್ನೆಗೆ ಉತ್ತರ ನೆಗೆಟಿವ್ವಿನಲ್ಲಿದೆ! ಹಾಗೇನೇ ನನ್ನ ಕೈಗೆ ಸಿಕ್ಕ ಆ ದಿನದ ಫೋಟೋದಲ್ಲಿ ಸಾದುಗಪ್ಪಿನ ನನ್ನ ಮುಖ ಬೆಳ್ಳಗೆ ಕಂಗೊಳಿಸುತ್ತಿದ್ದದನ್ನು ನೋಡಿದಾಗ ತೂಗುಹಾಕಿದ ನೆಗೆಟಿವ್ಹುಗಳಿಗೆ ರಕ್ತವರ್ಣಲೇಪನದ ರಹಸ್ಯ ಹೊಳೆಯಿತು.

## ಹರಿಯದೆ ಹಂಚಿ

ಚಿತ್ರ ಬಿಡಿಸುವದಾಗಲಿ ಫೋಟೋ ತೆಗೆಯುವದಾಗಲಿ ಸ್ವಸಂತೋಷಕ್ಕಾದರೂ ತನ್ನ ಕಲೆಯನ್ನು ಪ್ರದರ್ಶಿಸದಿದ್ದರೆ ಬೇರೆಯವರಿಗೂ ಹಂಚಿ ಆನಂದಿಸದಿದ್ದರೆ, ಏನು ಉಪಯೋಗ? ಕಾಮತರ ಮನೆಯವರೆಲ್ಲರ ಪರಿಶ್ರಮದಿಂದ ಅವರ ನೂರಾರು ಛಾಯಾ ಚಿತ್ರಗಳು ವೆಬ್ಸೈಟಿನ ಸಂದರ್ಶಕರಿಗೆ ಲಭ್ಯವಾಗಿವೆ. ಲಕ್ಷಾಂತರ ಜನರು,

ಜಿಜ್ಞಾಸುಗಳು, ಭಾರತ ಪ್ರವಾಸಿಕರು ಅದನ್ನೋದಿ ತಮ್ಮ ತಿಳುವಳಿಕೆಯನ್ನು ಹೆಚ್ಚಿಸಿಕೊಂಡಿರಲಿಕ್ಕೇ ಬೇಕು. ಕೆಡದೆ, ಹರಿಯದೆ ಕಾದಿರಿಸಿದ ಫೋಟೋಸಂಗ್ರಹ ಭಾರತೀಯ ನಾಡು - ನುಡಿಯ ಬಗ್ಗೆ 24 ತಾಸೂ ಮಾಹಿತಿ ಕೊಡುತ್ತಿದೆ.

## ಒಂದು ಚಿತ್ರ, ಹತ್ತು ಸಾವಿರ ಪದಗಳು, ಸಾವಿರಾರು ಪುಟಗಳು

"ಒಂದು ಚಿತ್ರಕ್ಕೆ ಸಾವಿರ ಪದಗಳ ಬೆಲೆ" ಎಂಬುದು ಒಂದು ಚೀನೀ ಗಾದೆ. ಆದರೆ ಈ ಉದ್ಧರಣೆಯಲ್ಲಿ ದೋಷವಿದೆಯಂತೆ. 'ಒಂದು ಚಿತ್ರದ ಅರ್ಥ ಹತ್ತು ಸಾವಿರ ಶಬ್ದಗಳಲ್ಲಿ ವ್ಯಕ್ತಿ' ಎಂದಿರಬೇಕಿತ್ತಂತೆ. ಅದೇನೇ ಇರಲಿ, ಇಲ್ಲಿ ಅಸಂಖ್ಯ ಚಿತ್ರಗಳಲ್ಲದೆ ಒಂದು ವಿಶ್ವಕೋಶ ತುಂಬುವಷ್ಟು ಮಾಹಿತಿಯುಳ್ಳ ಪುಟಗಳುಂಟು. ಒಮ್ಮೊಮ್ಮೆ ಒಂದು ಚಿತ್ರ ಹುಟ್ಟಿಸಲೂ ಸಾವಿರ ಎಡರು - ತೊಡರುಗಳು ಬರುತ್ತವೆ. ಇದು ಸತ್ಯವೆಂದು ಯಾವ ಸಫಲ ಛಾಯಾಚಿತ್ರಕಾರನೂ ಹೇಳಿಯಾನು. ಒಂದುಕಡೆ ಕಾಮತರೂ ಇದನ್ನೇ ಚಿತ್ರವತ್ತಾಗಿ ಬರೆದಿದ್ದಾರೆ. ತಮ್ಮ ಫೋಟೋಗ್ರಾಫಿಯ ಉತ್ಸಾಹದಿಂದಲೇ ಹೊಟ್ಟೆ ತುಂಬಿಸಿಕೊಂಡು ಪಟ್ಟದಕಲ್ಲಿಗೆ ಹೊರಟ ಕಾಮತರಿಗೆ ಕ್ಯಾಮರಾ ಚೀಲ ಭಾರವಾಗಿರಲಿಲ್ಲ. ಬೇಕಾದ ಚಿತ್ರಗಳನ್ನೆಲ್ಲಾ ಕ್ಯಾಮರಾದಲ್ಲಿ ಸೆರೆ ಹಿಡಿದು ತಿರುಗಿ ಬರುವಾಗ ಮಾತ್ರ ಆ ಕ್ಯಾಮರ ಲೆನ್ಸುಗಳ ಗಂಟು ಎಷ್ಟು ಒಜ್ಜೆ! ಎಂದು ಮನದಟ್ಟಾಯಿತು ಬಡಪಾಯಿಗೆ. ಬಸ್ಸು ಸಿಗದೆ ಕಾಲುನಡಿಗೆಯಲ್ಲೇ ವಾಪಸಾದವರಿಗೆ ಬಡ ರೈತರ ಹಸಿಸೇಂಗಾ ಕಾಳೇ ಮೃಷ್ಟಾನ್ನವಾಯಿತು ಅವರ ಪಾಲಿಗೆ. ಕಾಮತ ಪೋಪೊರಿಯಲ್ಲಿ ಒಂದು ಕಡೆ ಬರೆದ ಈ ಮಾರ್ಮಿಕ ಘಟನೆ ನನ್ನ ಮನಸ್ಸನ್ನು ಮುಟ್ಟಿದ್ದು ಯಾಕಂದರೆ ಹಿಂದೊಮ್ಮೆ ನಾನು ಲಂಡನ ದೃಶ್ಯಗಳನ್ನೆಲ್ಲಾ ಕ್ಯಾಮರಾದಲ್ಲಿ ಹಿಡಿದಿಡುವ ಹುಚ್ಚಿನಲ್ಲಿ ಹಸಿವು - ನೀರಡಿಕೆಗಳಿಲ್ಲದೆ ತಾಸುಗಟ್ಟಲೆ ತಿರುಗಿ ಸುಸ್ತಾಗಿ ಬಿಗ್ ಬೆನ್ ಇದುರಿಗಿನ ಪಾರ್ಲಿಮೆಂಟ ಚೌಕದ ಬೆಂಚಿನ ಮೇಲೆ ಮೈಮರೆತು ಮಲಗಿದ್ದೆ. ಆಗ ನನ್ನನ್ನು ಮೃದುವಾಗಿ ಮುಟ್ಟಿ ಎಬ್ಬಿಸಿದ್ದು ಲಂಡನ್ **bobby** (ಪೋಲೀಸನೋ) 'ಹಮ್ ದರ್ದ' ಕಾಮತರ ಅದೃಶ್ಯ ಕೈಯೋ ಗೊತ್ತಾಗಲಿಲ್ಲ!

## ಪ್ರೇಮ ಸಲ್ಲಾಪ

**Kamat potpourri** ಮೊದಲು ನನ್ನ ಕಣ್ಣಿಗೆ ಬಿದ್ದು ಈಗ ಎರಡು ವರ್ಷಗಳಾಗಿರಬೇಕು. ಮತ್ತೆ ಮತ್ತೆ ನೋಡಿದಾಗಲೆಲ್ಲ ಪ್ರತಿ ಸಲ ಹೊಸ ಹೊಸದಾಗಿ ಕಂಡ ಒಂದೊಂದು ಪುಟದ ಮೇಲೂ ಹೀಗೆಯೇ ಪ್ರೀತಿ ಬೆಳೆದಿದೆ. ಆ ಜ್ಞಾನ ಸಾಗರದ ದಂಡೆಯ ಮೇಲೆ ನಿಂತು ಕರಾವಳಿಯ ಪೋರಿಯೊಡನೆ ಸಮಯ ಸಿಕ್ಕಾಗಲೆಲ್ಲ ನನ್ನ ಪ್ರೇಮ ಸಲ್ಲಾಪ ನಡೆದಿದೆ! '**potpourri**' ನನ್ನೊಬ್ಬನದೇ ಅಲ್ಲ, ಎಲ್ಲರ ಸೊತ್ತೂ ಹೌದು! ನನ್ನ ಪಾಲಿಗೆ ಮಾತ್ರ 'ಪೋರಿ ಸ್ಫೂರ್ತಿಯ ಸೆಲೆಯಾಗಿದ್ದಾಳೆ'!

# ಅವರೂ ಅಮೇರಿಕೆಗೆ ಹೋಗಿದ್ದರು

*- ಕೆ.ಜಿ. ಶ್ರೀಕಂಠದಾನಿ*

**ಆ**ದರೆ, ವಾಪಸ್ಸು ಬಂದಾಗ ಅವರು ಹಂಚಿಕೊಂಡ ಅನುಭವ ತೂಕವುಳ್ಳದ್ದೂ, ವಿಭಿನ್ನವೂ ಆಗಿತ್ತು. ಕೃಷ್ಣಾನಂದರು ಅಮೇರಿಕೆಗೆ ಹೋದಾಗ "ವಿಶ್ವ ವ್ಯಾಪಾರ ಕೇಂದ್ರ"ದ ಅವಳಿ ಕಟ್ಟಡಗಳು ಇನ್ನೂ ಹುಟ್ಟಿರಲಿಲ್ಲ. ಈಗ ಅಳಿದಿವೆ! ಅವರ ಮೇಲೆ ಪ್ರಭಾವ ಬೀರಿದ ಅಮೇರಿಕನ್ ಜೀವನ ಪದ್ಧತಿ ಇಂದೂ ಹಾಗೆಯೇ ಉಳಿದಿದೆಯೇ? ('ಸಂಸ್ಕೃತಿ' ಎಂಬ ಶಬ್ದದ ಬಳಕೆ ಉಚಿತವಲ್ಲ ಎಂದು ಭಾವಿಸಿ) ಈ ಹಿನ್ನೆಲೆಯಲ್ಲಿ, ಆ ಅನುಭವದ ಪ್ರಸ್ತುತತೆಯನ್ನು ಒರೆಗೆ ಹಚ್ಚುವ ಪ್ರಯತ್ನ ಇದಾಗಿದೆ.

ಕೃಷ್ಣಾನಂದರು ತಮ್ಮ ನಾಲ್ಕು ವರ್ಷಗಳ ಅಮೇರಿಕೆಯ ಸಂಗವನ್ನು ಪ್ರಾಮಾಣಿಕವಾಗಿ ತೆರೆದಿರುವುದರೊಂದಿಗೆ ಅವರ ಹಾಗೂ ಪುಸ್ತಕದ ಇತಿ - ಮಿತಿಗಳನ್ನು ವಿನಯಪೂರ್ವಕವಾಗಿ ಕಾಯ್ದುಕೊಳ್ಳುತ್ತಾರೆ. ಅದೇ ತೆರನಾಗಿ ಈ ಪುಟ್ಟ ಲೇಖನವೂ ಕೇವಲ ಪ್ರಾತಿನಿಧಿಕವೆಂಬುದನ್ನು ಓದುಗ ಮನಸ್ಸಿನಲ್ಲಿಟ್ಟುಕೊಳ್ಳಬೇಕು.

ಅಮೇರಿಕನ್ ಜೀವನಶೈಲಿ, ವ್ಯಕ್ತಿಯನ್ನು ಬೇಗ ಮುದುಕನನ್ನಾಗಿ ಮಾಡುತ್ತದೆಂಬ ಮಾತು ನಿಜ! ಎಂದಾದರೆ ಕಾಮತರೂ ಅದನ್ನು ಮನಗಂಡರೆಂದು ತಿಳಿಯುತ್ತದೆ. ಈಗ (ಸುಮಾರು ನಾಲ್ಕು ದಶಕಗಳಲ್ಲಿ) ಮುದುಕರಾಗುವ ಮುನ್ನವೇ ಕೊನೆಯುಸಿರೆಳೆಯುವವರ ಸಂಖ್ಯೆ ಹೆಚ್ಚಾಗಿದೆ. ಇದು ಜಾಗತಿಕ ಸತ್ಯವಾದರೂ, ಅಮೇರಿಕದಲ್ಲಿ ವಿದೇಶೀಯರು ಮೂಡಿಸಿಕೊಂಡಿರುವ ವಿಚಿತ್ರ (?) ಆಸಕ್ತಿಯಿಂದ ಅಲ್ಲಿ ಎದ್ದು ಕಾಣುತ್ತದೆ. ಮನುಷ್ಯನ ಸಾಮರ್ಥ್ಯವನ್ನು ಮೀರಿದ ಒತ್ತಡಗಳನ್ನು ಹೇರಿಕೊಂಡು ಅಲ್ಪಕಾಲದಲ್ಲೇ ಹೆಚ್ಚಿನದನ್ನು ಸಾಧಿಸುವ ವಿಧಾನವನ್ನು ಕಾಮತರು ಕೆಲವು ಕಡೆ ಮೆಚ್ಚುತ್ತಾರಾದರೂ ಒಪ್ಪಿಕೊಂಡು ಅನುಸರಿಸುವುದಿಲ್ಲ. ಇದೇ ಭಾರತೀಯರಿಗೂ ಅಮೇರಿಕನ್ನರಿಗೂ ಇರುವ ಚಿಕ್ಕದಾದರೂ ಗಹನವಾದ ವ್ಯತ್ಯಾಸ. ತಡವಾಗಿಯಾದರೂ ಅಲ್ಲಿ ಇದರ ಬಗ್ಗೆ ಚರ್ಚೆಯಾಗುತ್ತಿದೆ.

ಕೃಷ್ಣಾನಂದರಿಗೂ ಮುಂಚೆ ಅಲ್ಲಿಗೆ ಹೋದ ಅನೇಕ ಭಾರತೀಯರು ಆ ಜನರ ಸ್ನೇಹಪರತೆ, ಸಮಾನಭಾವಗಳನ್ನು ಮೆಚ್ಚಿ, ಮಾತಿನ ಮೋಡಿಗೆ ತಲೆದೂಗಿ ಅಲ್ಲೇ ನೆಲೆಸಿದ್ದರು. ಕಾಮತರ ಧ್ಯೇಯ ಬೇರೆಯೇ ಆಗಿತ್ತು (ಪು. 83-84). ಉನ್ನತ ವ್ಯಾಸಂಗದ ನಂತರ ತವರಿಗೆ ಮರಳಿ ಮಹತ್ತರವಾದುದನ್ನು ಸಾಧಿಸಬೇಕೆಂಬ ಆಕಾಂಕ್ಷೆ ಅವರಿಗಿತ್ತು. ಆದರೆ, ಭಾರತದಲ್ಲಿ ಅವರಿಗೆ ಯೋಗ್ಯ ಅವಕಾಶ, ಮನ್ನಣೆಗಳು ಸಿಗಲಿಲ್ಲ. ಕಾಮತರಂಥ ಪ್ರತಿಭಾನ್ವಿತರು ಈಗಲೂ ಗುಣಮಟ್ಟ, ಪ್ರೋತ್ಸಾಹ, ಅವಕಾಶಗಳಿಗಾಗಿ ವಿದೇಶಗಳಿಗೆ ಹೋಗಿ ಅಲ್ಲೇ ನೆಲೆಸುತ್ತಿದ್ದಾರೆ. ಇದು ಇನ್ನೆಷ್ಟು ದಿನ? ಪರಿಸ್ಥಿತಿ ಬದಲಾಗಿದೆ. ಅಮೇರಿಕೆಯಲ್ಲೂ "ಉದ್ಯೋಗಸೃಷ್ಟಿ" ಯ ದೊಡ್ಡ ತಲೆನೋವಿನ ಸೃಷ್ಟಿಯಾಗಿದೆ. ಮೂಲನಿವಾಸಿಗಳ ಬಗ್ಗೆ ತಳೆದ ನಿರ್ಲಕ್ಷ್ಯಧೋರಣೆಯಿಂದ ಅಸಮಾಧಾನ ಭುಗಿಲೆದ್ದಿದೆ. ಈ ಬದಲಾವಣೆಗೆ ಅಮೇರಿಕೆಯ ಉದಾರ ನೀತಿಯೂ, ಭಾರತದಂಥ (ಶಾಶ್ವತವಾಗಿ!) ಅಭಿವೃದ್ಧಿಶೀಲ ದೇಶಗಳ ಅಸಾಹಯಕತೆಯೂ ಕಾಣಿಕೆಯಿತ್ತಿವೆ. ಕಳೆದ ಎರಡು ವರ್ಷಗಳಲ್ಲಿ ವಿಶ್ವದ ರಕ್ಷಣಾಸನ್ನಿವೇಶ ಕಟುವಾಗಿದೆ. ವಲಸೆ ಇನ್ನುಮುಂದೆ ಹಿಂದಿನಷ್ಟು ಸುಲಭವಲ್ಲ. ಇದು ಒಂದು ರೀತಿಯಲ್ಲಿ ಒಳ್ಳೆಯದೇ ಆದರೂ, ಸದ್ಯದ ಬೆಳವಣಿಗೆಗಳ ದೂರಪರಿಣಾಮಗಳನ್ನು ನೋಡಿದಾಗ ಸಮಂಜಸವೆನಿಸುವುದಿಲ್ಲ. ಸ್ಥಿತಿ ಹೀಗೇ ಬೆಳೆದು, ದೇಶ - ದೇಶಗಳ ನಡುವೆ ಅಪನಂಬಿಕೆಯ ಗೋಡೆಯನ್ನು ಕಟ್ಟದಂತೆ ನೋಡಿಕೊಳ್ಳುವುದು ನಮ್ಮ ಕೈಲೇ ಇದೆ. ಆಂತರಿಕ ಕಾರಣಗಳೇ 'ಸಂಸ್ಕೃತಿ' ಯ ಬೆಳವಣಿಗೆಯನ್ನು ಕುಂಠಿತಗೊಳಿಸದಂತೆ (ಪು-23) ಎಚ್ಚರ ವಹಿಸಬೇಕಿದೆ.

ಕೃಷ್ಣಾನಂದರು ಅರವತ್ತರ ದಶಕದಲ್ಲಿ ತಾವು ಭೇಟಿಕೊಟ್ಟಿದ್ದ ಅಮೇರಿಕೆಯ ಪ್ರದೇಶಗಳಿಗೆ ಮತ್ತೊಮ್ಮೆ ತೊಂಭತ್ತರಲ್ಲಿ ಹೋಗಿ ಪ್ರಮುಖವಾದ ಬದಲಾವಣೆಗಳನ್ನು ದಾಖಲಿಸಬೇಕಿತ್ತು. ಅದೊಂದು ಉತ್ತಮ ಪ್ರಯೋಗವಾಗುತ್ತಿತ್ತು. ಸಮಾಜವೊಂದರ ವಿಕಾಸವನ್ನು ತುಲನಾತ್ಮಕವಾಗಿ ಅಭ್ಯಸಿಸಲು ಈ ರೀತಿಯ ಬರವಣಿಗೆ ಆವಶ್ಯಕ. ಕೃಷ್ಣಾನಂದರ 'ನಾನೂ ಅಮೇರಿಕೆಗೆ ಹೋಗಿದ್ದೆ', ಪ್ರವಾಸಕಥೆಯು ಕೆಲ ಸಾರ್ವಕಾಲಿಕ ಸತ್ಯಗಳನ್ನು ಬಿಂಬಿಸುತ್ತದೆ. ತಮ್ಮತನವನ್ನು ಉಳಿಸಿಕೊಂಡು ಅಮೇರಿಕೆಯನ್ನು ವಿಮರ್ಶೆ ಮಾಡುವ ಅವರ ಹಂಬಲದಲ್ಲಿ ಓದುಗರೂ ಭಾಗಿಯಾದರೆ, ಮುಂದೊಮ್ಮೆ ಅಲ್ಲಿಗೆ ಹಾರುವ ಅವಕಾಶ ಸಿಕ್ಕಾಗ ನಿರಾಶೆಯಾಗದೆಂದು ಖಂಡಿತವಾಗಿ ಹೇಳಬಹುದು.

*( ಕಾಮತರ 'ನಾನೂ ಅಮೇರಿಕೆಗೆ ಹೋಗಿದ್ದೆ', ಪುಸ್ತಕವನ್ನು ಇನ್ನೊಮ್ಮೆ ಓದಿದಾಗಿನ ಪ್ರತಿಕ್ರಿಯೆ. )*

# ಮನ ಮುಟ್ಟುವ 'ಮರು ಪಯಣ'

*- ಡಾ. ಕಮಲಾ ಹೆಮ್ಮಿಗೆ*

೧೯೭೭ರಲ್ಲಿ ನಾನು ಆಕಾಶವಾಣಿ ಬೆಂಗಳೂರು ಕೇಂದ್ರ ಸೇರಿದ್ದು. ಮುಖೇಡಿಯೂ, ಮಿತಭಾಷಿಯೂ ಆಗಿದ್ದ ನನ್ನನ್ನು ಚಿಪ್ಪಿನಿಂದ ಹೊರಗೆ ಬರುವಂತೆ ಮಾಡಿದವರು ಸಾಹಿತಿ ಡಾ. ಜ್ಯೋತ್ಸ್ನಾಕಾಮತರು. ಬೆಂಗಳೂರೆಂಬ ಮಹಾನಗರಿಯಲ್ಲಿ ಆಗಿನ್ನೂ ವ್ಯಾವಹಾರಿಕ ಮಾತ್ರವಲ್ಲದ ಮಾನವೀಯತೆಯ ಸೆಲೆ ಇತ್ತು. ಬಿಡುವಿನ ವೇಳೆಯಲ್ಲಿ ಜ್ಯೋತ್ಸ್ನಾರವರು, ತಮ್ಮ ಬಾಳ ಸಂಗಾತಿ ಮಹಾಮೌನಿ, ಡಾ. ಕೃಷ್ಣಾನಂದ ಕಾಮತರ ಕುರಿತು ಪ್ರಸ್ತಾಪಿಸುತ್ತಿದ್ದರು. (ಮುಂದೆ, 'ಹೀಗಿದ್ದೇವೆ ನಾವು', 'ಸಂಸಾರದಲ್ಲಿ ಸ್ವಾರಸ್ಯ', 'ನಗೀಕ್ಯಾದಿಗೀ' ಕೃತಿಗಳಲ್ಲಿ ಲಲಿತ ಶೈಲಿಯಿಂದಲೇ ತಮ್ಮವರ ಸ್ವಭಾವ ಗುಣಗಳನ್ನು ನಿರೂಪಿಸಿದರು.) ಹಿರಿಯ ಸಾಹಿತಿ, ವಿಜ್ಞಾನಿ, ಫೋಟೋಗ್ರಾಫರ್ ಆಗಿದ್ದ ಕೃಷ್ಣಾನಂದರು ವ್ಯಾಪಾರೀ ಹಿನ್ನೆಲೆಯಿಂದ ಬಂದವರು. ಒಳ ಮುಚುಕ. ನನ್ನೂರು ಭಾಸ್ಕೇರಿ ಅನ್ನೋದು. ಅಲ್ಲಿ 'ಕುಸುಮ' ಅಂತ ಪತ್ರಿಕೆ ಬರ್ತಿತ್ತು. ಅಲ್ಲಿಂದ ನನಗೆ ಆತನ ಪರಿಚಯ ಆಗಿದ್ದು ತುಂಬಾ ವಿನಯಿ, ಸಜ್ಜನ, ಎಂದು ಎನ್.ಪಿ. ಭಟ್ಟರು (ಡಾ. ವಿ.ಕೃ. ಗೋಕಾಕರ ಅಳಿಯ) ಕಾಮತರು ವಿಧಿವಶರಾದ ಸಂದರ್ಭದಲ್ಲಿ (೨೦ ಫೆ. ೨೦೦೨) ಹೇಳಿದ್ದು ನೆನಪಿದೆ.

ಕಾಮತ ದಂಪತಿಗಳು ೧೫.೦೮.೨೦೦೧ರಲ್ಲಿ ಧಾರವಾಡಕ್ಕೆ 'ಮರುಪಯಣ' ಕೃತಿಯ ಬಿಡುಗಡೆ ಸಮಾರಂಭಕ್ಕೆಂದು ಬಂದಾಗ, ಎಲ್ಲ ಸಾಹಿತಿಗಳನ್ನು ಭೆಟ್ಟಿಯಾಗಿ ನನ್ನಲ್ಲಿಗೂ ಬಂದರು. ಅವರು 'ವಿಶ್ವಾಸ ಪೂರ್ವಕವಾಗಿ' ಎಂದು ಸಹಿ ಹಾಕಿಕೊಟ್ಟ ಕೃಷ್ಣಾನಂದರರದು ಅದೇ ಕಡೆಯ ದರ್ಶನ. 'ಓದ್ರಿ! ಚೆನ್ನಾಗಿಲ್ಲದಿದ್ದರೂ, ಯಾಕೆ ಅಂತ ಬರೀರಿ' ಎಂದಿದ್ದರು! ನಾನು ಓದಿ ಪ್ರತಿಕ್ರಿಯಿಸಿದೆ.

ಮರುಪಯಣ, ಒಂದು ಅನುಭವ ಕಥನ. (ಪ್ರತಿಷ್ಠಿತ ಮನೋಹರ ಗ್ರಂಥಮಾಲೆ, ಪ್ರಕಟಿಸಿದೆ.) ಇಪ್ಪತ್ತೊಂದು ಭಾಗಗಳಲ್ಲಿ ಲೇಖಕರ ಪರಿಸರ ಕಾಳಜಿ,

ದಲಿತಪರ ಪ್ರೀತಿ, ಕಾಲ ಮಾಡಿದ ಬದಲಾವಣೆಗಳ ಕುರಿತಾದ ವಿಷಾದ ಹರಡಿಕೊಂಡಿವೆ. ಪ್ರಕಾರದಲ್ಲಿ ಇದನ್ನು 'Experiences' ಎಂದು ಕಾಣಿಸಿದೆ. ಇದನ್ನು ಪರಿಸರವಾದಿ ದಿ. ಡಾ. ಕುಸುಮಾ ಸೊರಬ ಅವರಿಗೆ ಅರ್ಪಿಸಿರುವುದು ಯೋಗ್ಯವಾಗಿದೆ.

ನೂರೆಂಟು ಪುಟಗಳ ಈ ಕೃತಿಯಲ್ಲಿ ಜೋ, ವಿಕ್, ಕ್ರಿಶ್, ಕಿಮ್, ತುಳಸು ಮುಖ್ಯ ಪಾತ್ರಗಳು. ಪ್ರವಾಸಕಥನ ತಂತ್ರದ ಮೂಲಕ ಕೃಷ್ಣಾನಂದರು ಆಶೆ - ಭ್ರಮನಿರಸನಗಳ ಕುರಿತು ಹೇಳುತ್ತಾರೆ. ನಾನು ಜ್ಯೋತ್ಸ್ನಾರನ್ನು ಈ ಥರದ ವಿದೇಶೀ ಹೆಸರುಗಳನ್ನು ಬಳಸಿದ್ದರ ಔಚಿತ್ಯದ ಕುರಿತಾಗಿ ಕೇಳಿದೆ. 'ನಾವು ಪರಸ್ಪರರನ್ನ ಸಂಭೋದಿಸೋದೆ ಹಾಗೆ' ಎಂದಾಗ ಸಮಾಧಾನವಾಯಿತು. (ವಿಕಾಸ, ಕನ್ನಡ ಮಾಧ್ಯಮದಲ್ಲೇ ಕಲಿಯಲೆಂದು ಹೊನ್ನಾವರದಲ್ಲಿ ಬಿಟ್ಟಿದ್ದುದೂ ನೆನಪಾಯಿತು.) ಸೊಸೆ ಕಿಮ್, 'ಇಂಡಿಯಾಕ್ಕೆ ಮಾರು ಹೋಗಿ' ಯಾಕೋ ಅಮೇರಿಕೆಗೆ ಹಿಂದಿರುಗಿ ಹೋಗುದೇ ಬೇಡ ಅನಿಸುತ್ತದೆ...' ಎಂದು ನಾಂದಿ ಭಾಗದಲ್ಲಿ ಹೇಳುವುದೇ ಕಥನದ ಕೀಲಿಕೈ. ಇತಿಹಾಸಜ್ಞೆ ಜೋ ಅದನ್ನನುಮೋದಿಸುವುದು ಸಹಜವೇ ಆಗಿದೆ. 'ನನ್ನ ಹುಟ್ಟೂರಾದ ಹೊನ್ನಾವರ ನನ್ನ ಕನಸಿನ ಮನೆ. ಇಳಿವಯಸ್ಸನ್ನು ಅಲ್ಲಿ ಕಳೆಯುವಂತಾದರೆ ಹೆಚ್ಚಿನ ಭಾಗ್ಯ ಇನ್ನೊಂದಿಲ್ಲ!' ಇದು ಕ್ರಿಶ್ ಪ್ರತಿಕ್ರಿಯೆ.

ತೆಳು ಹಾಸ್ಯದ ಶೈಲಿಯಲ್ಲಿ ಯಾತ್ರೆ ಶುರುವಾಗುತ್ತದೆ. ಹಂದಿಯನ್ನು ಹೋಲುವ ಬಸ್..., ಎಳನೀರನ್ನು ಕಂಡರಿಯದ ಸೊಸೆ, ಕಿರು ಬೆರಳು ಗಾತ್ರದ ಜೋಗ್ ಫಾಲ್ಸ್... ಇವೆಲ್ಲ ಮುಗುಳ್ನಗಿಸುತ್ತವೆ. ಶರಾವತಿ ಪರಿಸರವನ್ನು ಹಾಳುಗೆಡವಿದ್ದರ ಬಗೆಗೆ ಕ್ರಿಶ್, ಭಾವಪರವಶತೆ ವಿಷಾದಗಳಿಂದ ಪ್ರಸ್ತಾಪಿಸುತ್ತಾರೆ. 'ಶರಾವತಿ ನದಿ ಎಂದರೆ, ನನಗೆ ತಾಯಿ ಇದ್ದಂತೆ...' ಎಂದು ಮನುಷ್ಯ, ಬತ್ತಿಸಿ ಬಿಟ್ಟಿರುವ ಬಗ್ಗೆ, 'ಟೇಲ್‌ರೇಸ್ ಯೋಜನೆ' ಬರಬೇಕಾದ ಸಂದರ್ಭದ ಬಗ್ಗೆ ಕೊಂಚ ಸಿಟ್ಟಿನಿಂದಲೇ ಮಾತಾಡುತ್ತಾರೆ. ನದಿಯ ಉಗಮದ ಕುರಿತು ಹೇಳುತ್ತಾ, ನಿರೂಪಣೆ ಶುಷ್ಕವಾಗದಂತೆ ನಿರ್ವಹಿಸುತ್ತಾರೆ. ಭ್ರಷ್ಟ ರಾಜಕಾರಣಿಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. ಸಾಫ್ಟ್‌ವೇರ್ ಇಂಜಿನಿಯರ್ ಮಗ ವಿಕ್, ಕೀಟವಿಜ್ಞಾನಿ ಕ್ರಿಶ್ ಇವರೆಲ್ಲರ ಚರ್ಚೆ ವೈಚಾರಿಕವಾಗಿದ್ದು, ವಸ್ತುಸ್ಥಿತಿಯ ಅನಾವರಣವನ್ನು ಮಾಡುತ್ತವೆ. ಸ್ವಾತಂತ್ರ್ಯ ಪೂರ್ವದ, ನಂತರದ, ದಿನಗಳ ಕುರಿತಾದ ವಿಚಾರಗಳೂ ಸ್ವಾರಸ್ಯಕರ. 'ಅಂದು ಮಾಡಿದ ದೇಶಸೇವೆಯಂತಹುದನ್ನು ಈಗ ಕೈಗೊಂಡರೆ ಅದು, ದೇಶದ್ರೋಹವಾಗುತ್ತದೆ' ಎಂಬ ಅವರ ಮಾತು ಡ್ರೈವರ್ ಚಿಗರೆಗೆ ಹಾಯಿಸಿ ಕೊಂದ ಕ್ರಿಯೆಗೆ ಬಂದ ಪ್ರತಿಕ್ರಿಯೆಯಾದರೂ ಸಾಮಾನ್ಯೀಕರಣವೂ ಆಗಿ ಕಾಣುತ್ತದೆ. ಜೋ

ಪೋರ್ಚುಗೀಸರನ್ನು, ಕೆಳದಿಯ ಅರಸರನ್ನು ಎದುರಿಸಿದ ಕೆಚ್ಚೆದೆ ರಾಣಿ ಚೆನ್ನಭೈರಾದೇವಿ 'ಕಾಳುಮಣಸಿನರಾಣಿ' ಎಂದೇ ಖ್ಯಾತಳಾಗಿದ್ದು ನಂತರ ಇಕ್ಕೇರಿ ರಾಜನ ವಶಕ್ಕೆ ಭಟ್ಕಳ್, ಹೊನ್ನಾವರ ಬಂದರುಗಳು ಬಂದದ್ದು ಮುಂತಾದ ಐತಿಹಾಸಿಕ ವಿವರ ಒದಗಿಸುತ್ತಾರೆ. ವೀರಗಲ್ಲು, ನಿಸಿದಿಗಲ್ಲು, ಬಸದಿ ಕುರಿತಾಗಿ ಪರಿಚಯಿಸುತ್ತಾರೆ.

ಕೃಷ್ಣಾನಂದರು ಅಧಿಕಾರಿಶಾಹೀ ವ್ಯವಸ್ಥೆಯನ್ನು ಟೀಕಿಸುತ್ತಾರೆ. ಬೆಂಗಳೂರಿನ 'ಡಾಲರ್ ಕಾಲೋನಿ' ಯನ್ನು ಉಲ್ಲೇಖಿಸದೇ ಬಿಟ್ಟಿಲ್ಲ. 'ಬೆಕ್ಕಿನ ಬಿಡಾರವೇ ಬೇರೆ' ಎಂಬ ನಾಣ್ನುಡಿಯ ಶೀರ್ಷಿಕೆ ಇದಕ್ಕೇ ಮೀಸಲಾಗಿದೆ.

ತುಳಸುವಿನ ಪಾತ್ರದ ಪ್ರವೇಶ, ಇಲ್ಲೇ ಆಗುತ್ತದೆ. 'ನಾವು ಕಾಲಕ್ಕನುಗುಣವಾಗಿ ಬಾಳಲು ಕಲಿಯಬೇಕು' ಎಂಬುದು ಅವನ ಧೋರಣೆ. ಅನಿವಾರ್ಯವಾಗಿ ಹಳ್ಳಿಯಲ್ಲಿರಬೇಕಾದ ಅವನ ವಿಚಾರ, ಸಹಜವೇ. 'ಕೆರೆ ಇದ್ದ ಜಾಗ ಇದು' ಎಂದು ಅವನಿಗೇ ಅಭ್ಯಾಗತರು ತೋರಿಸುವ ಪ್ರಸಂಗವೂ ಇದೆ! 'ಕರ್ನಲ್ ಹಿಲ್' ಪುಂಡರ ತಾಣವಾದದ್ದು, ಕವಿ ಬಿಲ್ಹಣ ಹೊನ್ನಾವರಕ್ಕೆ ಬಂದದ್ದು, ಇಬ್ನ್ ಬತೂತ ಊರ ಶಾಲೆಗಳ ಮಹತ್ವ ಕುರಿತು ಬರೆದದ್ದು, ನಾಶವಾದ ಟಿಪ್ಪು ಬಂಗ್ಲೆ ಇವುಗಳನ್ನೆಲ್ಲ ಕ್ರಿಶ್ ಪರಿವಾರ ವಿಷಾದ ಕುತೂಹಲಗಳಿಂದ ಚರ್ಚಿಸಿ, ನಿರಾಶೆಗೊಳ್ಳುವುದು ಓದುಗರನ್ನು ಸ್ಪಂದಿಸದಿರದು. ಇದಕ್ಕೆ ಪರ್ಯಾಯವಾಗಿ ತುಳಸು (ಕ್ರಿಶ್‌ರ ತಮ್ಮ) ಹಳ್ಳಿಗಾಡಿನ ರಾಜಕಾರಣ, ಪರಿಚಯಿಸುತ್ತಾನೆ! 'ಹೈಗುಂದ' ದ ಭಾಗದಲ್ಲಿ ಆಗಬೇಕಾದ ಉತ್ಖನನದ ಕುರಿತೂ ಕ್ರಿಶ್, ಹೇಳುತ್ತಾರೆ. ಹೊನ್ನಾವರ ಹೊನ್ನಿನಂತಿತ್ತು, ಹೇಗೆ ಹಾಳಾಗಿ ಹೋಯಿತು! ಎಂದು ಉದ್ಗರಿಸುತ್ತಾರೆ.

ಕಂಚುಗಾರರು, ಮೀನುಗಾರರು ಹೀಗೇ ಆತ್ಮೀಯವಾಗಿ ಬದುಕುತ್ತಿದ್ದರು ಎಂಬುದರ ಮೆಲುಕೂ ಇದೆ. ಬಸಳೆದಂಟೊಂದೇ ಇಡೀ ಕುಟುಂಬಕ್ಕೆ ಜೀವಸತ್ವ ನೀಡುತ್ತಿದ್ದ ಸ್ಥಿತಿಯಲ್ಲಿ ಇದ್ದುದನ್ನು ನೆನೆಯುತ್ತಾರೆ. ಉಪ್ಕರಿ, ಪೋಡಿ, ಪತ್ರೊಡೆ ಹೀಗೆ 'ಪರ್ಣಸಂಸ್ಕೃತಿ' ಇತ್ತೆಂಬುದಕ್ಕೆ ದಾಖಲೆ ನೀಡುತ್ತಾರೆ.

'ಬೆಂದುರ್ಲಿ' ಮುಂತಾದ ಔಷಧೀಯ ಸಸ್ಯಗಳ ಮಹತ್ವವನ್ನೂ ಕಾಣಿಸುತ್ತಾರೆ.

'ಆಸ್ಪತ್ರೆ ಬಂದಂತೆ ಸಾವು ನೋವು ಹೆಚ್ಚಾದ' ವಿಪರ್ಯಾಸವನ್ನು ತುಳಸು ಹಾಸ್ಯ ಪೂರ್ಣವಾಗಿ ಹೇಳುವುದು ಅರ್ಥವತ್ತಾಗಿದೆ. ಓದುಗರಿಗೆ ರುಚಿ ತರಿಸುತ್ತದೆ. 'ಮತ್ಸ್ಯಾವತಾರ... ಅದರ ಅವಸಾನ' ಕುರಿತು ಕರಾವಳಿ ಭಾಗದ ಮತ್ಸ್ಯಬ್ರಾಹ್ಮಣ ಕುಟುಂಬ ಚರ್ಚಿಸುವುದು ಚೆನ್ನಾಗಿದೆ. ಇದು ವೈಜ್ಞಾನಿಕ ಹಿನ್ನೆಲೆ ಹೊಂದಿರುವುದು ಮಹತ್ವದ್ದು. 'ನಮ್ಮ ಕನಸುಗಳೆಲ್ಲ ಹೊಳೆಯಲ್ಲಿ ಹುಣಸೇ ಹಣ್ಣು ತೊಳೆದಂತಾದವು!'

ಎಂಬ ಉದ್ಗಾರ, ಹುಟ್ಟೂರಲ್ಲಿ ನೆಲೆಸಲು - ಪ್ರಯೋಗಾರ್ಥವಾಗಿ - ಬಂದಿದ್ದ ಕ್ರಿಶ್ ತೆಗೆದಿದ್ದು ಈ ಎಲ್ಲ ಸಿಂಹಾವಲೋಕನದಿಂದ ಎಂದು ಪ್ರತ್ಯೇಕ ಹೇಳಬೇಕಿಲ್ಲ.

'ಈ ಊರಲ್ಲಿ ಸುಖವಾಗಿ ಸಾಯಲು ಸಹ, ಅವಕಾಶವಿಲ್ಲ' ಎಂದು ಬೀಜ ಮಾತಿದೆ. ಪರಿವಾರ 'ಮರು ಪಯಣ - ಬೆಂಗಳೂರತ್ತ ಮಾಡಲು ನಿರ್ಧರಿಸುವುದರೊಂದಿಗೆ ಸಂಕಥನ ಮುಗಿಯುತ್ತದೆ. ಮಗ, ಸೊಸೆ, ಅಮೇರಿಕೆಗೆ ಬರಲು ಆಹ್ವಾನಿಸಿದಾಗ ಕ್ರಿಶ್' ಇಲ್ಲಿಯೂ ಜೀವನ, ತೀರ ಅಸಹನೀಯವಾದಾಗ, ನಿಮ್ಮ ಆಮಂತ್ರಣವಿದ್ದೇ ಇದೆಯಲ್ಲ ಎನ್ನುತ್ತಾರೆ.

ಒಟ್ಟು ಈ ಕೃತಿ ಒಂದು ಕಾಲಘಟ್ಟ ಕಂಡು ನಂತರ ಬದಲಾದ 'ಪರಿಸರ' ಕುರಿತು ವಿಶ್ಲೇಷಿಸುತ್ತದೆ. ಹಣ ಮಾಡುವುದೇ ಮುಖ್ಯವಾದಾಗ 'ಮಾಲಿನ್ಯ' ಕೂಡಾ ನಗಣ್ಯವಾಗುತ್ತದೆ ಎಂಬ ಕಠೋರ ಸತ್ಯವನ್ನುಸುರುತ್ತದೆ. ಜೀವನ, ವ್ಯಾಪಾರವಾಗಿರುವ ಬಗೆಗೆ ಲೇಖಕರ ದೃಷ್ಟಿ ಹರಿದಿದೆ.

ಅವರ ನಿರ್ದಾಕ್ಷಿಣ್ಯಪರ ಪ್ರವೃತ್ತಿ, ಅಪ್ಪಿಕೋ, ನರ್ಮದಾ ಮುಂತಾದ ಚಳುವಳಿಕಾರರನ್ನು ಟೀಕಿಸದೇ ಬಿಟ್ಟಿಲ್ಲ.

ನಿಸರ್ಗದ ಸಮತೋಲ ಕಾಯ್ದುಕೊಳ್ಳಬೇಕೆಂಬ ಸಂದೇಶವೂ ಕೃತಿಯಲ್ಲಿ ಹುದುಗಿದೆ. ಮನುಷ್ಯ ಅತೃಪ್ತನಾಗಿರುವುದು ಇದಕ್ಕೆಲ್ಲ ಮೂಲ ಅನ್ನುವುದು ಅವರ ನಿಲುವು. ಉತ್ತರ ಕನ್ನಡ ಜಿಲ್ಲೆಯ ಬಗ್ಗೆ ಕಾಮತರಿಗೆ ತುಂಬ ಅಭಿಮಾನ. ಬ್ರಹ್ಮ ಬಹಳ ಪುರುಸೊತ್ತಿನಿಂದ ಈ ಭಾಗ, ಕಟೆದಿರಬೇಕು ಎಂಬುದು ಅವರ ಅನಿಸಿಕೆ. ಆದರೆ ಆ ಕಾಲ ಬೇರೆ. ಇದು, ಬೆಂಗಳೂರಿಗಿಂತ ಕಡೆ! ಎಂಬುದು ಅವರ ತರ್ಕ. ಅಲ್ಲದೆ, ನಾವು ಬ್ರಿಟಿಷ್ ವಸಾಹತುಗಾರರನ್ನು ತೊಲಗಿಸಿ ಅಮೆರಿಕಾದ ಆರ್ಥಿಕ ದಾಸ್ಯಕ್ಕೆ ಒಳಗಾಗಿದ್ದೇವೆ ಎಂಬುದು ಅವರ ಸ್ಪಷ್ಟ ವಿಚಾರ.

ವಿಜ್ಞಾನಿಗಳಾದ ವಿಕ್, ಕಿಮ್ ಪ್ರಶ್ನೆಗಳಿಗೆ ಮಾವ, ಅತ್ತೆ ಸವಿವರವಾಗಿ ಉತ್ತರಿಸುತ್ತಾರೆ. ಅದರಲ್ಲಿ ಸೂಕ್ಷ್ಮ ಅವಲೋಕನ, ಒಳನೋಟಗಳಿವೆ. ಅಧಿಕೃತತೆ ಇದೆ. ಉದಾ : ವಿಕ್ ಕೇಳುವ ಈ ಪ್ರಶ್ನೆ 'ನಮ್ಮ' ಪೂರ್ವಜರ ಮನೆಯ ಗೋಡೆಗಳ ಮೇಲೆಲ್ಲ ಚಿತ್ರಗಳಿದ್ದವೆಂದು ಬರೆದಿದ್ದೀರಿ. ಅವನ್ನೆಲ್ಲ ಯಾರು ರಚಿಸುತ್ತಿದ್ದರು?'

ಅದಕ್ಕೆ ಉತ್ತರ : 'ಕರಾವಳಿ ಪ್ರದೇಶದಲ್ಲಿ ವಿಪರೀತ ಮಳೆ ಹಾಗೂ ಅರ್ದ್ರತೆಗಳಿಂದಾಗಿ ಫ್ರೆಸ್ಕೋದಂಥ ಭಿತ್ತಿ ಚಿತ್ರಗಳು ಬಲು ಬೇಗ ನಶಿಸಿಹೋಗುತ್ತದೆ...' ಎಂದು 'ಕಾವಿಚಿತ್ರಕಲೆ' ಬಂತು...

ಕಿಮ್ ಫೋಟೋ ಕ್ಲಿಕ್ಕಿಸುವುದರ ಬಗೆಗೆ ಕೇಳಿದಾಗ ತುಳಸು ಹೇಳುವ ಈಗ ಆ ಜನರಿಗೆ ಪ್ರೋತ್ಸಾಹವಿಲ್ಲದೆ, ಹೊಟ್ಟೆಗೂ ಇಲ್ಲದೆ... ಆ ಕಲೆ ಎಂದೋ ನಶಿಸಿ ಹೋಗಿದೆ...' ಎಂಬ ಮಾತು ಮನ ಕಲಕುತ್ತದೆ. ಕೌದಿ, ಕುರಿತೂ ಇದೇ ಬಗೆಯ ಪ್ರತಿಕ್ರಿಯೆ. ತುಳಸು ಕೂಡಾ, ಸೂಕ್ಷ್ಮಜ್ಞ - ವಾಸ್ತವ ಬಲ್ಲವನು ಎಂಬಂಶ ಇಲ್ಲಿ ಮಹತ್ವದ್ದು.

ಯಾವ ಸಿದ್ಧ ಸಾಹಿತ್ಯ ಪ್ರಕಾರದ ಚೌಕಟ್ಟಿಗೂ ಒಳಪಡದ ಈ 'ಮರುಪಯಣ' ಕೃಷ್ಣಾನಂದರ ಅಂತಿಮ ಪಯಣವನ್ನೂ ಧ್ವನಿಸುತ್ತಿದೆ!

ಕೃತಿ ಬಿಡುಗಡೆ ದಿನ, ಅವರು ತುಂಬಾ ಖುಶಿಯಲ್ಲಿದ್ದರು. ಇಪ್ಪತ್ತೆರಡು ಕೃತಿಗಳ ಲೇಖಕ ಇಷ್ಟು ನಿರಾಯಾಸದಲ್ಲಿದ್ದಾರೆ ಎಂದುಕೊಂಡೆ. ಹೋಟೆಲ್ 'ಹೊಯ್ಸಳ' ದಲ್ಲಿ ತಂಗಿದ್ದ ದಂಪತಿಗಳು 'ಮಹಿಳಾ ಸಾಹಿತ್ಯಿಕಾ' ಪ್ರಕಾಶನದ ಶ್ರೀಮತಿ ಹನುಮಾಕ್ಷಿಗೋಗಿಯವರನ್ನೂ ನನ್ನನ್ನೂ ಹರಟೆಗೆ ಕರೆದಿದ್ದರು. ಊಟವೂ ಆಯಿತು. ತಾವು ತೆಗೆದ ಅನೇಕ ಚಿತ್ರಗಳಲ್ಲಿ ಸಿದ್ದಿಯರು, ಖಾರವಿಯರು, ಕುಣಬಿಗಳು, ಗೊಂಡರು ಹೀಗೇ ಸ್ಥಿರವಾಗಿದ್ದಾರೆಂಬುದನ್ನು ಉತ್ಸಾಹದಿಂದ ವಿವರಿಸುತ್ತಿದ್ದರು. ಅಷ್ಟು ಮಾತಾಡಿದ ಕಾಮತರನ್ನು ಆ ಮುನ್ನ, ನಾನು ಕಂಡೇ ಇರಲಿಲ್ಲ. ಮುಂದೆ, ಪತ್ರಿಕೆಯಲ್ಲಿ ಅವರ ನಿಧನವಾರ್ತೆ ಓದಿ ತಳಮಳಗೊಂಡೆ. ಜ್ಯೋತ್ಸ್ನಾರ ಮೂಲಕ ನಾನು ಕಂಡ ಕೃಷ್ಣಾನಂದರನ್ನು ಶಬ್ದಗಳಲ್ಲಿ ಹಿಡಿದಿಡಲೆತ್ನಿಸಿದೆ.

'ಕೃಷ್ಣಾನಂದ ಕಾಮತರೆ ನೀವು ಹೊರಟದ್ದೆಲ್ಲಿಗೆ?' ಎಂದು ಕರಾವಳೀ ಶೈಲಿಯಲ್ಲಿ ಬರೆದೆ. ಸಂಜೆ, ಜ್ಯೋತ್ಸ್ನಾರಿಗೆ ದೂರವಾಣಿ ಕರೆ ಮಾಡಿದಾಗ ಪ್ರೌಢಭಾವದ ಅವರು 'ಹೌದಮ್ಮಾ ಏನ್ಮಾಡೋದು!' ಎಂದರು. ನನ್ನ ಪುಟ್ಟ ಲೇಖನಕ್ಕೆ ಛಾಯಾಚಿತ್ರಗಳನ್ನು ಒದಗಿಸಿದರು. ಮುಂದೆ, ೨೨.೦೨.೨೦೦೪ ರಂದು ಕಾಮತ ಪ್ರತಿಷ್ಠಾನ ಉದ್ಘಾಟನೆ ಹಾಗೂ ಸಂಸ್ಮರಣೆಯ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದೆ. ಇದು ಹೊನ್ನಾವರದಲ್ಲಿತ್ತು. ಕುಟೀರ, ನಿಸರ್ಗದ ಮಡಿಲಲ್ಲಿದೆ. (ಕಾರ್ಯಕ್ರಮ, ಸೇಂಟ್ ಥಾಮಸ್ ಸ್ಕೂಲ್‌ನಲ್ಲಿ ಆಯೋಜಿತವಾಗಿತ್ತು.) ಛಾಯಾಚಿತ್ರ ಪ್ರದರ್ಶನ, ಕೃತಿ ಪ್ರದರ್ಶನ, ಅಭಿಮಾನಿಗಳಿಗೆ ಪ್ರಿಯವೆನಿಸಿತು. ನನಗೆ ಸಂತಸ ತಂದಿದ್ದು ಜ್ಯೋತ್ಸ್ನಾರು ಬೆಳಗಿನ ವಾಯುವಿಹಾರ ಸಮಯದಲ್ಲಿ ಶರಾವತಿ ಬ್ರಿಡ್ಜ್ ಮೇಲೆ ನಿಂತು ಅದ್ಭುತ ಸೂರ್ಯೋದಯ ದೃಶ್ಯ ತೋರಿಸಿದ್ದು. ಆದರೆ ಮೀನುಗಳಿಗಾಗಿ ಹಾಹಾಕಾರಿಸುತ್ತಿದ್ದ, ಅಸಂಖ್ಯ ಕಾಗೆ - ಹದ್ದುಗಳು ಕಿರಿಕಿರಿ ಉಂಟು ಮಾಡುತ್ತಿದ್ದವು.

ಇನ್ನೊಂದು ಸಂಗತಿ ಎಂದರೆ, ಮರು ಪಯಣದ 'ತುಳಸು' ವಿನ ಆದರಾತಿಥ್ಯ! ಕಾರೊಂದರಲ್ಲಿ ನಮ್ಮನ್ನು ಬಿಟ್ಟು ಇಡಗುಂಜಿ, ಕಾಸರಕೋಡ ಸಮುದ್ರ ದಂಡೆ, ಕರ್ಕಿ

ಗುಡಿಗಳನ್ನು ತೋರಿಸಿದ್ದು. ಬಹುಕಾಲದಿಂದ ಪರಿಚಯವಿರುವ ಕನ್ನಿಕಾ ಹೆಗಡೆಯವರನ್ನು ಕಂಡಿದ್ದು, ಪುನರ್ಪುಳಿ ಶರಬತ್ ಕುಡಿಯುತ್ತ ಮಾತನಾಡಿದ್ದು, ನಿಡುಗಾಲ ಮನದಲ್ಲಿ ಉಳಿಯುತ್ತದೆ.

ಅಂದ ಹಾಗೆ, ಕೃಷ್ಣಾನಂದರು ತಮ್ಮ ಕಣ್ಣುಗಳನ್ನು 'ಮರಣೋತ್ತರ ದಾನ' ಮಾಡಿದ್ದರಂತೆ. ಅವೀಗ ಯಾರೋ ಅಂಧರಿಗೆ ಜಗತ್ತಿನ ಅದ್ಭುತಗಳನ್ನು ಕಾಣಿಸುತ್ತಿರಬಹುದು... ಅನ್ನಿಸುತ್ತಿದೆ. ಕಡೆಯದಾಗಿ ಅಂದು, ಅಧ್ಯಕ್ಷ ಭಾಷಣ ಮಾಡಿದ ಡಾ. ಜಿ.ವಿ. ಹೆಗಡೆಯವರು ಅಂದಿದ್ದು ಮನದಲ್ಲಿ ನಿಂತಿದೆ : 'ಕಲಾವಿದ ಕವಿಗಳು ಸಿಗುತ್ತಾರೆ. ನಿಗರ್ವಿ, ಸರಳ ವ್ಯಕ್ತಿಗಳು ಸಿಗುವುದು ಕಷ್ಟ. ಕಾಮತರು ಅಪ್ಪಟ ಮನುಷ್ಯ!'.

# ಕಾಣದ ಗುರುವಿಗೆ ನಮನ

*- ಡಿ.ಜಿ. ಮಲ್ಲಿಕಾರ್ಜುನ*

**ಡಾ.** ಕೃಷ್ಣಾನಂದ ಕಾಮತರನ್ನು ನಾನು ಮೊದಲು ನೋಡಿದ್ದು ಟೀವಿಯಲ್ಲಿ ಪ್ರಸಾರವಾದ ಅವರ ಸಂದರ್ಶನದಲ್ಲಿ. ನಂತರ ಅವರ ವೆಬ್‌ಸೈಟ್ **www.kamat.com** ಮುಖಾಂತರ ಅವರ ಪುಸ್ತಕಗಳ ಬಗ್ಗೆ ತಿಳಿದುಕೊಂಡು, ಅವು ಸಿಗುವ ವಿಳಾಸ ಕೋರಿ ಅವರಿಗೆ ಪತ್ರ ಬರೆದೆ.

ಹೀಗೆ ಪತ್ರದಿಂದ ಶುರುವಾದ ಅವರ ಪರಿಚಯ ಅವರನ್ನು ನೋಡುವಲ್ಲಿಗೆ, ಅವರನ್ನು ಮಾತನಾಡಿಸುವಲ್ಲಿಗೆ ಮುಂದುವರಿಯದಿದ್ದುದು ನನ್ನ ದುರಾದೃಷ್ಟ.

'ಬೆಂಗಳೂರಿಗೆ ಬಂದಾಗ ನಮ್ಮ ಮನೆಗೆ ಬನ್ನಿ' ಎಂದು ಪತ್ರಿಸಿದ್ದ ಅವರನ್ನು ಭೇಟಿ ಮಾಡಲು ನಾನು ಹೋಗುವಷ್ಟರಲ್ಲಿಯೇ ಅವರು ವಿಧಿವಶರಾದದ್ದು ನನ್ನ ಪಾಲಿಗೆ ತುಂಬಲಾರದ ನಷ್ಟ.

ಈ ದರ್ಶನ ನೀಡದ ಗುರುವಿನ ಏಕಲವ್ಯ ಶಿಷ್ಯನಾಗಿರುವೆನು ನಾನು.

ನಾನೊಂದು ಲೇಖನವನ್ನು ಬರೆಯುವುದು ಮತ್ತು ಅದನ್ನೊಂದು ಪತ್ರಿಕೆ ಪ್ರಕಟಿಸುವುದು ಇದು ನಾನು ಕನಸಿನಲ್ಲೂ ಕಾಣದಂತಹ ಸಂಗತಿ. ನನ್ನ ಕೈಲಿ ಅಸಾಧ್ಯವಾದ ಸಂಗತಿಯೆಂದೇ ಭಾವಿಸಿದ್ದೆ. ಡಾ. ಕಾಮತರು ನನಗೆ ಬರೆದ ಪತ್ರದಲ್ಲಿ, "ಸುಂದರವಾದ ಹಸ್ತಾಕ್ಷರ, ಚಿತ್ರಕಲೆ, ಛಾಯಾಗ್ರಹಣಗಳಲ್ಲಿ ಆಸಕ್ತಿ ಮುಂತಾದವುಗಳಿಂದ ನೀವು ಒಳ್ಳೆಯ ಬರಹಗಾರನಾಗಬಹುದಾಗಿದೆ, ಆದರೆ ಕನ್ನಡ ಬರಹಗಾರನಿಗೆ ಆದಾಯದ ಅಥವಾ ಪ್ರತಿಫಲದ ಆಸೆ ಇರಲೇಕೂಡದು! ಎಂದು ಮೊದಲಲ್ಲೇ ಹೇಳಿಬಿಡುತ್ತೇನೆ" ಎಂದು ಬರೆದಿದ್ದರು.

ನನ್ನ ಮನಸ್ಸಿನಲ್ಲಿ ಬರೆಯಬೇಕೆಂಬ ಅಭಿಲಾಷೆಯ ಬೀಜವನ್ನು ಬಿತ್ತಿದವರೇ ಡಾ|| ಕಾಮತರು. ಅವರ ನಂತರ ನನ್ನನ್ನು ಪ್ರೋತ್ಸಾಹಿಸುತ್ತಿರುವವರು ಡಾ|| ಜ್ಯೋತ್ಸ್ನಾ ಕಾಮತರು. ಹೀಗಾಗಿ ನನ್ನ ಹಲವಾರು ಲೇಖನಗಳು ಪ್ರಮುಖ ಪತ್ರಿಕೆಗಳಲ್ಲಿ

ಪ್ರಕಟವಾಗಲು ಪ್ರೋತ್ಸಾಹ, ಪ್ರೇರಣೆ ಮತ್ತು ಪ್ರೇರಕ ಶಕ್ತಿಯಾಗಿ ನಿಂತಿರುವವರು ಡಾ. ಕಾಮತರು.

ನನಗೆ ಮೊದಲಿನಿಂದಲೂ ಛಾಯಾಗ್ರಹಣವನ್ನು ಕಲಿಯಬೇಕೆಂಬ ಆಸೆಯಿತ್ತು. ಡಾ. ಕಾಮತರಿಗೆ ನಾನು ಬರೆದಿದ್ದ ಪತ್ರದಲ್ಲಿ ಛಾಯಾಗ್ರಹಣವನ್ನು ಕಲಿಸುವಿರಾ? ಎಂದು ಕೇಳಿದ್ದೆ. ಅವರು ಇಂಟರ್‌ನೆಟ್‌ಗೆ ಪ್ರತಿವಾರವೂ ಸಚಿತ್ರ ಲೇಖನಗಳನ್ನು ಕಳಿಸುತ್ತಲೇ ಇರಬೇಕಾದ್ದರಿಂದ ಈ ರೀತಿಯ ಚಟುವಟಿಕೆಗಳಿಗೆ ಬಿಡುವು ಸಿಗುವುದಿಲ್ಲವೆಂದು ಬರೆದಿದ್ದರು.

ಡಾ. ಕಾಮತರು ಛಾಯಾಗ್ರಹಣವನ್ನು ತಾವೇ ಸ್ವತಃ ಅಭ್ಯಸಿಸಿ, ಸಾಧನೆ ಮಾಡಿ, ಕರಗತಗೊಳಿಸಿಕೊಂಡಿದ್ದವರು. ಅವರ ಪತ್ರದಲ್ಲಿ, "1971ರಲ್ಲಿ ನನ್ನ ಪ್ಲಾಸಿ ಕೀಟಗಳ ಕದನ ಮುಗಿಸಿ ಮುಂದೇನು? ಎಂದು ಯೋಚಿಸುತ್ತ ಬೆಂಗಳೂರಿಗೆ ಬಂದು 'ವೈಜ್ಞಾನಿಕ ಛಾಯಾಗ್ರಹಣ' ವನ್ನು ವೃತ್ತಿ ಸೇವೆ ಎಂದು ಪ್ರಾರಂಭಿಸಿದೆ. ಈ ಕ್ಷೇತ್ರದಲ್ಲಿ ನನಗೆ ಯಾವುದೇ ತರಬೇತಿ, ಅನುಭವಗಳೂ ಇರಲಿಲ್ಲ. ಆದರೆ ಹುಚ್ಚು ಧೈರ್ಯಕ್ಕೆ ಕೊರತೆ ಇರಲಿಲ್ಲ. ಶ್ರಮವಹಿಸಿ ಹಗಲು ರಾತ್ರಿ ದುಡಿದು ಯಶಸ್ಸನ್ನು ನನ್ನದಾಗಿಸಿದೆ. ಬೆಂಗಳೂರಿನ ಅನೇಕ ಸಂಶೋಧನಾಲಯಗಳು ವೈಜ್ಞಾನಿಕ ಛಾಯಾಗ್ರಹಣದಲ್ಲಿ ನನ್ನ ನೆರವನ್ನೂ ಯಾಚಿಸಿದವು. ಕೆಲವೊಮ್ಮೆ ಮೈಸೂರು, ತಿರುಪತಿ, ಮುಂಬೈಗಳಿಂದಲೂ ಬೇಡಿಕೆ ಬಂದದ್ದುಂಟು. ಕಾಲು ಶತಮಾನದ ತನಕ ಈ ಸೇವೆ ಸಲ್ಲಿಸಿ 1995ರಲ್ಲಿ ಮಂಗಳ ಹಾಡಲೇಬೇಕಾಯಿತು," ಎಂದು ಬರೆದಿರುವರು.

ಅವರಿಂದ ಪ್ರೇರಣೆ ಪಡೆದು ಕ್ಯಾಮೆರಾ ಕೊಂಡೆ. ಇಂಟರ್‌ನೆಟ್‌ನಲ್ಲಿ ಅವರ ಸಹಸ್ರಾರು ಚಿತ್ರಗಳನ್ನು ಗಮನಿಸುತ್ತಾ, ನನ್ನ ಆಲೋಚನೆಗಳನ್ನು ಸೇರಿಸಿಕೊಂಡು ಕಲಿಯುತ್ತಲೇ ಮುಂದುವರಿಯುತ್ತಿರುವೆನು. ಹಲವಾರು ಪತ್ರಿಕೆಗಳಲ್ಲಿ ನಾನು ತೆಗೆದಿರುವ ಛಾಯಾಚಿತ್ರಗಳು ಪ್ರಕಟವಾಗಿವೆ. ಇದಕ್ಕೆ ಕಾರಣರು ಡಾ. ಕಾಮತರು.

ಅವರು ಚಿತ್ರಗಳಿಗೆ ಕೊಡುವ ವಿವರಣೆಗಳಂತೂ ಅನನ್ಯವಾದವು. ಅಷ್ಟೊಂದು ಅರ್ಥಪೂರ್ಣವಾಗಿ, ಚುಟುಕಾಗಿ, ಹಾಸ್ಯಲೇಪನದೊಂದಿಗೆ ವಿವರಣೆಯನ್ನು ಕೊಟ್ಟಿರುವರು.

ಡಾ. ಕಾಮತರು ತಮ್ಮ ಛಾಯಾಚಿತ್ರಗಳು, ಬರವಣಿಗೆ ಈ ಎರಡು ಕಲೆಗಳನ್ನೂ ಸಮ್ಮಿಳಿತಗೊಳಿಸಿ ಹಲವಾರು ಚಿತ್ರಲೇಖನಗಳನ್ನು ಬರೆದಿರುವರು. ಅದರಿಂದ ಪ್ರೇರಿತನಾಗಿ ನಾನು ಚಿತ್ರಗಳಿಲ್ಲದ ಲೇಖನಗಳನ್ನು ಊಹಿಸಿಕೊಳ್ಳಲಾರದವನಾಗಿದ್ದೇನೆ.

ಡಾ. ಕಾಮತರ ಮನೆಯಿರುವುದು ಅಪಾರ್ಟ್‌ಮೆಂಟ್‌ನಲ್ಲಿ. ಅಲ್ಲಿ ಹೂತೋಟವನ್ನು ಮಾಡಲು ಸಾಧ್ಯವಿಲ್ಲದಿದ್ದರೂ ಸಣ್ಣ ಸಣ್ಣ ಹೂಗಿಡಗಳನ್ನು ಬೆಳೆದು, ಆ ಹೂಗಳ ಬಳಿ ಇರುವ ಹುಳುಗಳ ಚಿತ್ರಣವನ್ನು ಮಾಡಿದುದರ ಬಗ್ಗೆ ಓದಿ ಅಚ್ಚರಿಪಟ್ಟೆ. ಛಾಯಾಗ್ರಹಣಕ್ಕಾಗಿ ಎಲ್ಲೆಲ್ಲೋ ಹೋಗಬೇಕೆಂದು ಭಾವಿಸಿದ ನನಗೆ ಮನೆಯ ಬಳಿಯ ಹೂಗಿಡಗಳಲ್ಲಿಯೇ ಸೂಕ್ಷ್ಮ ಪ್ರಪಂಚವಿದೆಯೆಂದು ತೋರಿಸಿಕೊಟ್ಟವರು ಡಾ. ಕಾಮತರು. ಇದರಿಂದ ಪ್ರೇರೇಪಿತನಾಗಿ ಹುಳು, ಚಿಟ್ಟೆಗಳ ಹಿಂದೆ ಬಿದ್ದು (ಎಲ್ಲಾ ಮನೆಯ ಬಳಿಯೇ) ಹಲವಾರು ಚಿತ್ರಗಳನ್ನು ತೆಗೆದಿರುವೆನು. ಅವನ್ನು ನೋಡಿದವರು, 'ಇದನ್ನು ಎಲ್ಲಿ ಹೋಗಿ ತೆಗೆದೆ?' ಎಂದು ಪ್ರಶ್ನಿಸುತ್ತಾರೆ. 'ಮನೆಯ ಬಳಿಯೇ' ಎಂದಾಗ ಆಶ್ಚರ್ಯ ವ್ಯಕ್ತಪಡಿಸುತ್ತಾರೆ.

ಡಾ. ಕಾಮತರ ಸಂಗದಿಂದ ನಾನು ರೂಢಿಸಿಕೊಂಡಿರುವ ಇನ್ನೊಂದು ಸಂಗತಿಯೇನೆಂದರೆ ಎಲ್ಲಿಗೆ ಹೋದರೂ ಕ್ಯಾಮೆರಾವನ್ನು ಜೊತೆಗೊಯ್ಯುವುದು. ಹಾಗೂ ಹೋಗಿ ಬಂದ ಸ್ಥಳದ ಅನುಭವಗಳನ್ನು ದಾಖಲಿಸಿಡುವುದು.

1992ರ ಪ್ರಜಾವಾಣಿ ವಿಶೇಷಾಂಕದಲ್ಲಿ ಡಾ. ಕಾಮತರ, "ಕಾಣದ ಕ್ಯಾಮರಾ : ಹೆಂಗಳೆಯರು" ಎಂಬ ಚಿತ್ರಲೇಖನ ಪ್ರಕಟವಾಗಿತ್ತು. ಅದರಲ್ಲಿ ಹುಲಿ, ಹುಲ್ಲೆ, ಹಕ್ಕಿಗಳಿಗಿಂತಲೂ ಬಿಕ್ಕಟ್ಟಿನದಾದ ಈ ಹೆಂಗಳೆಯರನ್ನು ಚಿತ್ರಿಸುವುದು ಎಷ್ಟು ಕಷ್ಟ, ಅದನ್ನು ಅವರು ಸಾಧಿಸಿದ ರೀತಿ, ಒಂದೊಂದು ಚಿತ್ರವೂ ಹೊಸ ಸತ್ಯವನ್ನು ಬೆಳಕಿಗೆ ತರುವ ಬಗೆ - ಹೀಗೆ ನವಿರು ಹಾಸ್ಯದೊಂದಿಗೆ ಬರೆದ ಲೇಖನವನ್ನು ಓದಿ ನನಗೆ ಛಾಯಾಗ್ರಹಣದ ಇನ್ನೊಂದು ಮಜಲು ಕಾಣಿಸಿತು.

ಡಾ. ಕಾಮತರು ಹಲವಾರು ಸಾಹಿತಿಗಳ ಛಾಯಾಚಿತ್ರಗಳನ್ನು ಕ್ಲಿಕ್ಕಿಸಿರುವರು. ಆ ಚಿತ್ರಗಳೆಲ್ಲ ಇತಿಹಾಸದ ದಾಖಲೆಗಳೆಂದೇ ನನ್ನ ಅನಿಸಿಕೆ.

1994ರ ಸುಧಾ ಯುಗಾದಿ ವಿಶೇಷಾಂಕದಲ್ಲಿ ಇವರ "ಸಾಹಿತಿಗಳ ಸಂಗದಲ್ಲಿ" ಎಂಬ ಚಿತ್ರಲೇಖನ ಪ್ರಕಟವಾಗಿತ್ತು. ಅದರಲ್ಲಿ ಮಾಸ್ತಿ, ಕುವೆಂಪು, ಅಡಿಗರು, ಆದ್ಯರಂಗಾಚಾರ್ಯ, ಶಂಬಾಜೋಷಿ, ಬಿ.ಜಿ.ಎಲ್. ಸ್ವಾಮಿ ಮತ್ತು ಅನುಪಮಾ ನಿರಂಜನರ ವಿವಿಧ ಭಂಗಿಗಳ ಛಾಯಾಚಿತ್ರಗಳು ವಿವರಣೆ ಸಮೇತವಾಗಿ ಪ್ರಕಟವಾಗಿತ್ತು. ಮುಖದಲ್ಲಿನ ಭಾವನೆಗಳನ್ನು ಛಾಯಾಚಿತ್ರದಲ್ಲಿ ಮೂಡಿಸುವುದು ಅಸಾಮಾನ್ಯ ಕೆಲಸ. ಕಾಮತರಿಂದ ನಾನೆಷ್ಟೋ ಕಲಿಯಬೇಕಿದೆ.! ಅವರಿಲ್ಲವೇ ಎಂದು ಹಳಹಳಿಸುವುದು ಇದರಿಂದಲೇ.

ಶುಭಾಶಯ ಪತ್ರಗಳನ್ನು ತಾವೇ ಸ್ವತಃ ತಯಾರಿಸಿ, ಚಿತ್ರಿಸಿ ಕಳಿಸುತ್ತಿದ್ದವರು

ಡಾ. ಕಾಮತರು. ಅವರ ಶುಭಾಶಯ ಪತ್ರಗಳು, ಕೊಡುವವರು ಮತ್ತು ತೆಗೆದುಕೊಳ್ಳುವವರ ಮಧ್ಯೆ ಇರುವ ಒಂದು ಭಾವನಾತ್ಮಕ, ಪ್ರೀತಿ, ಅನುಭೂತಿಯ ಬೆಸುಗೆ ಎಂದು ಭಾವಿಸಿದ್ದವರು. ಕೃತ್ರಿಮತೆ ಅವರಿಗಿಷ್ಟವಾಗುತ್ತಿರಲಿಲ್ಲ. ನಾನು ಸಹ ಅವರಂತೆಯೇ ಶುಭಾಶಯ ಪತ್ರಗಳು ಎಷ್ಟೇ ಪುಟ್ಟದಾದರೂ ಸ್ವತಃ ತಯಾರಿಸಿ ಕಳುಹಿಸುವವನಾಗಿದ್ದೇನೆ.

ಮುಖತಃ ಭೇಟಿಯಾಗಲು ಸಾಧ್ಯವಾಗದೆ ಇದ್ದರೂ ಡಾ. ಕಾಮತರು ನನ್ನ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಪ್ರಭಾವ ಬೀರಿದ್ದಾರೆ. ಬಹುಮುಖ ಪ್ರತಿಭಾನ್ವಿತರಾದ ಅವರ ಜೀವನದಿಂದ ಯುವಜನತೆ ಖಂಡಿತವಾಗಿಯೂ ಅನೇಕ ವಿಚಾರಗಳನ್ನು ಕಲಿಯಬಹುದು ಮತ್ತು ಪ್ರಭಾವಿತರಾಗಬಹುದಾಗಿದೆ.

ಡೈರಿ ಬರವಣಿಗೆ, ಪತ್ರ ಬರವಣಿಗೆ, ಪ್ರವಾಸ ಸಾಹಿತ್ಯ, ಅನುಭವ ಕಥನಗಳು, ಛಾಯಾಚಿತ್ರಗಳು, ಚಿತ್ರಲೇಖನಗಳು - ಇವುಗಳಿಂದೆಲ್ಲಾ ನಾನು ಪ್ರಭಾವಿತನಾಗಿದ್ದೇನೆ.

ಅವರ ಸಾಹಿತ್ಯವನ್ನು ಓದುವುದು, ಅವರ ಸರಳ ಸುಂದರ ಮನಸ್ಸನ್ನು ನಮ್ಮದಾಗಿಸಿಕೊಳ್ಳುವುದು - ಇದೇ ನಾವುಗಳು ಅವರಿಗರ್ಪಿಸುವ ಗುರುದಕ್ಷಿಣೆ ಎಂದು ಭಾವಿಸುತ್ತೇನೆ.

ಡಾ. ಕೃಷ್ಣಾನಂದ ಕಾಮತರಿಗೆ - ನಮಸ್ಕಾರಗಳು 21.09.1984

'ಕಾಲರಂಗ' ಓದಿದೆ. ಮೊದಲ ಕೆಲ ಟಿಪ್ಪಣಿಗಳನ್ನು ನೋಡಿ ಹಾಗೆಯೇ ಇಟ್ಟು ಕೊಂಡಿದ್ದುದಕ್ಕೆ ಖೇದವಾಯಿತು. ನೀವು ಏನೇ ಬರೆಯಲಿ ವಿವರಗಳು, ಐತಿಹಾಸಿಕ ಹಿನ್ನೆಲೆ ಮತ್ತು ವಸ್ತುವಿನ ಹಿಡಿತದಿಂದ ಬರೆಯುತ್ತೀರಿ. ಮಧ್ಯಪ್ರದೇಶದ ಆದಿವಾಸಿ ಜೀವನದ ನಿಕಟ ಪರಿಚಯವಾಗಿಸುವಂತಿದೆ ಬರವಣಿಗೆ. ಅಲ್ಲಿಯ ಪ್ರಾಣಿ ಪ್ರಪಂಚ, ಸಸ್ಯಪ್ರಪಂಚ ಮೊದಲಾದ ವಿವರಗಳನ್ನೆಲ್ಲ ಕೊಟ್ಟಿದ್ದೀರಿ. ವಾಕಣಕರರಂತೂ ಸಮರ್ಥ ಪಾತ್ರ ಚಿತ್ರಣವಾಗಿ ಮೂಡಿದ್ದಾರೆ. (ಖಜುರಾಹೋದ ಅಧ್ಯಾಯದಲ್ಲಿ ಆ ದೇವಸ್ಥಾನದ ಮೇಲೆ ಮುಖ್ಯವಾಗಿ ಏನೂ ಹೇಳದೆ ಆ ಬಗೆಗಿನ ಜಾಸ್ತಿ ಅಭಿಪ್ರಾಯಗಳನ್ನು ತೊಳೆಯಲು ಮಾತ್ರ ಪ್ರಯತ್ನಿಸಿದ್ದೀರಲ್ಲ!) ಈ ಅನುಭವದ ಹಿನ್ನೆಲೆಯಲ್ಲಿ ಸಾಕಷ್ಟು ಫೋಟೋಗಳನ್ನು ನೀವು ತೆಗೆದಿರಬಹುದು. ಬೆಂಗಳೂರಿಗೆ ಬಂದಾಗ ಅವನ್ನೆಲ್ಲ ನೋಡುವ ಆಸೆಯಾಗಿದೆ.

ನಿಮ್ಮ

**ಎಸ್.ಎಲ್. ಭೈರಪ್ಪ**

ಡಾ. ಜ್ಯೋತ್ಸ್ನಾ ಕಾಮತರಿಗೆ ನಮಸ್ಕಾರಗಳು

ನಿಮ್ಮ ಬೆಂಗಳೂರು ಹೊಸಮನೆಯ ವಿಳಾಸ ಗೊತ್ತಿಲ್ಲ. ಆದ್ದರಿಂದ ನಿಮಗೆ ಈ ಪತ್ರ ಕಳಿಸಿದ್ದೇನೆ. **Through proper channel** ಕೂಡ ಆದಂತಾಯಿತು!

ನಿರಂಜನ

21.10.1981

ಮಾನ್ಯಮಿತ್ರ ಡಾ. ಕೃಷ್ಣಾನಂದರಿಗೆ

ಧಾರವಾಡದಿಂದ ಮೂರೂ ಪುಸ್ತಕಗಳು ಬಂದುವು. ಅನುಕ್ರಮವಾಗಿ ಮೂರನ್ನು ಓದಿ ಸಂತೋಷಪಟ್ಟೆ. ಏನಿದು? ಮೊದಲ ಎರಡನ್ನು ಓದಿರುವುದಾಗಿ ಈ ಮನುಷ್ಯ ಹೇಳಿರಲಿಲ್ಲವೆ ಎಂದು ಕೇಳಬೇಡಿ. ಡಾ. ಕೈಮಾಟರ ಬಳಿ ನಾನು ಮಾಡಬೇಕಾದ **Confession** ಒಂದಿದೆ. 1971 ಮಾರ್ಚ್‌ನಲ್ಲಿ ನನಗೆ ಪಾರ್ಶ್ವವಾಯು ಆಯಿತು. ಅದಕ್ಕೂ ತುಸು ಮುಂಚೆಯೇ ಜ್ಞಾನಗಂಗೋತ್ರಿಯ ಜೀವ ಜಗತ್ತು ಸಂಪುಟದ ರಚನೆ ಆಗುತ್ತಿದ್ದ ಸಮಯದಲ್ಲಿ ನಿಮ್ಮ ಪ್ರಸ್ತಾಪ ಬಂದಿತ್ತು ಅ. ಕೃಷ್ಣಭಟ್ಟರ ಜತೆ ಮಾತನಾಡುತ್ತಿದ್ದಾಗ. ನಿಮ್ಮ ಲ್ಯಾಬ್ ವಿಷಯ ಅವರು ಹೇಳಿದ್ದು, ಒಮ್ಮೆ ಹೋಗಿ ನೋಡಿ ಬನ್ನಿ ಅಂತ ನಾನು ಸೂಚಿಸಿದ್ದು - ಎಲ್ಲ ಅರೆಬರೆ ನೆನಪಿದೆ. ನಿಮ್ಮ 'ನಾನೂ' - ಪ್ರವಾಸಕಥನ ಪ್ರಕಟವಾದ ಮೇಲೆ ಮತ್ತು ಕೃ.ಕಾ.ರ ಬಗ್ಗೆ ಮಾತು. ನನ್ನ ಹಟದ ಕೆಲಸದ ನಡುವೆ ಬೇರೆ ಯಾವ ಓದೂ ಇರಲಿಲ್ಲ. 'ಕಲೆ, ಸಾಹಿತ್ಯ' ಸಂಪುಟದಲ್ಲಿ 'ಪ್ರವಾಸಕಥನ' ಶೀರ್ಷಿಕೆಯ ಕೆಳಗೆ ಅಥವಾ 'ಕನ್ನಡ ಸಾಹಿತ್ಯ' ದ ಕೆಳಗೆ ನಿಮ್ಮ ಕೃತಿಯ ಮತ್ತು ನಿಮ್ಮ ಹೆಸರು ಸೇರಿಸಿದೆವು. ಅದನ್ನು ಹೊಗಳಿಕೆ ಗೋಸ್ಕರ 'ಆ ಪುಸ್ತಕ ನಾನು, ಓದಿದ್ದೇನೆ' ಎನ್ನುವಂತಾಯಿತು!

ರಚನಾದ ರಾಯರು 'ವಂಗದರ್ಶನ' ದ ಬಗ್ಗೆ ಹೇಳಿದರು, ಅಪರೂಪದ ಜೋಡಿಯ ಮಾತು ಇತ್ತು. ಹೀಗೆ ಕಾಮತ ದಂಪತಿ ಹತ್ತಿರದವರಾದರು. 'ವಂಗದರ್ಶನ ಓದಿದ್ದೇನೆ' ಎನ್ನುವಂತಾಯಿತು! ಅಂಗವಿಕಲರ ಅವಸ್ಥೆ ಇದು. ಕ್ಷಮಿಸುತ್ತೀರಾ?

'ನಾನೂ...' ಕಾದಂಬರಿಯಂತೆ ಓದಿಸಿಕೊಂಡು ಹೋಗುತ್ತದೆ. 'ಬಂಗದೊರ್ಶನ್' ಎರಡು ಭಾಗ ಮಾಡಬೇಕಿತ್ತು. ಹಾಗೆ ನೋಡಿದರೆ ಮೊದಲಿನದೂ **2 Vol in one**. ನೀವು ಮತ್ತು ಅಮೇರಿಕ, ಪಾಶ್ಚಾತ್ಯ ಜಗತ್ತಿನಲ್ಲಿ ಭಾರತೀಯ ನಿಮ್ಮ ಬರೆವಣಿಗೆ ಏವನ್! ಮೂರನೆಯದಾಗಿ ಪ್ರಾಣಿ ಪರಿಸರ. ನಾನು ನಿರಂತರ ಅಭ್ಯಾಸಿ. ಗೊತ್ತಿದ್ದ ವಿಷಯಗಳ ಜತೆಗೆ ಹೊಸವು ಕೆಲವನ್ನೂ ಕಲಿತೆ.

('ಪ್ರಜಾವಾಣಿ' ಯಲ್ಲಿ ಮಧ್ಯಪ್ರದೇಶದ **trailer** ಯಾನೆ **teaser** ನೋಡಿದೆ. ಮುಂದೆ ಓದ್ತೇನೆ.)

ನೀವು ಇನ್ನೊಮ್ಮೆ ಬರಬೇಕು, ಮತ್ತೊಮ್ಮೆ. ನನ್ನ **quest** ಮುಗಿದಿಲ್ಲ. ನಿಮ್ಮ **quest** ಕೂಡ ಹಾಗೆಯೇ, ನಿಲುವುಗಳು ಬೇರೆ? ದಾರಿಗಳು ಬೇರೆ? (ಸ್ವಲ್ಪ ಮಟ್ಟಿಗೆ?) ದೊಡ್ಡದಲ್ಲ. ಯೋಚಿಸಿದಷ್ಟೂ, ಸಮಾನ ಅಂಶಗಳೇ ಹೇರಳ ಎನಿಸುತ್ತದೆ.

ವಿಜ್ಞಾನ ಸಂಬಂಧದ ವಿಷಯಗಳನ್ನು ಎಷ್ಟು ಸರಳವಾಗಿ ಬರೆಯುತ್ತೀರಿ! ವಿಜ್ಞಾನಿ ಸೌಂದರ್ಯೋಪಾಸಕನೂ ಆದಾಗ, ಅಥವಾ ಸೌಂದರ್ಯೋಪಾಸಕ, ವಿಜ್ಞಾನಿಯೂ ಆದಾಗ ಬರೆವಣಿಗೆಯ ಲೋಕದಲ್ಲಿ ಸಾಧ್ಯತೆಗಳು ಎಷ್ಟೊಂದು! ಅಕಾಡೆಮಿ ವತಿಯಿಂದ ಹೊರ ಬೀಳಬೇಕಾದ್ದು ಬೇಗನೆ ಬರಲಿ. ಹಸಿವೆ-ತಣಿಸಲಿ ನಿಮ್ಮ ಕಾಣದ ಕಿರೀಟಕ್ಕೆ ಕಂಗೊಳಿಸುವ ತುರಾಯಿ ಆಗಲಿ.

ಅಂದ ಹಾಗೆ ಹಿರಿಯ ಮಗಳು, ತೇಜಸ್ವಿನಿ ನಾಲ್ಕಾರು ದಿನಗಳ ಮಟ್ಟಿಗೆ ಪುಣೆಯಿಂದ ಬರುತ್ತಾಳೆ. ಅವಳಿಗೆ 'ನಾನೂ' - ಓದಲು ಕೊಡುತ್ತೇನೆ. ಪಿಹೆಚ್.ಡಿ., ಸ್ಟೇಟ್‌ನಲ್ಲಿ ಮಾಡುವ ಹಂಬಲ ಅವಳದು. **MA Bombay University** ನಲ್ಲಿ ಪ್ರಥಮ ದರ್ಜೆ ಪಡೆದು ಈಗ ಎಂ.ಫಿಲ್., ಮಾಡುತ್ತಿದ್ದಾಳೆ. ಸ್ಟೇಟ್‌ಗೆ ಹೋಗಿ ಮೂರು-ನಾಲ್ಕು ವರ್ಷ ಇದ್ದು (ಅಲ್ಲಿಂದ ಆರ್ಥಿಕ ನೆರವು ದೊರೆತರೆ) ಮರಳಿದ ಮೇಲೆ ಅವಳು ಮಾಡುವುದೇನು? ಪದ್ಯವೋ ಗದ್ಯವೋ ಬರೆಯುವುದು. ಊಟಕ್ಕಾಗಿ ನೌಕರಿ ಹಿಡಿಯುವುದು. ನೌಕರಿ ಯಾರು ಕೊಡುತ್ತಾರೆ? ಇನ್ನು ನೆಲೆನಿಲ್ಲುವ ಪ್ರಶ್ನೆ... (ಅಸ್ವಸ್ಥನ ಅಪಲಾಪ... ನಾನು ಅಷ್ಟು ಕಾಲ ಇರುವುದಿಲ್ಲ. ಮಕ್ಕಳ ತಾಯಿಯ ವಿಷಯ ಖಚಿತವಾಗಿ ಏನೂ ಹೇಳಲಾರೆ. ಕಿರಿಯರು ದೊಡ್ಡವರಾಗುತ್ತಾರೆ. ತಮ್ಮ ಸಂಸ್ಕಾರಕ್ಕೆ ಶಕ್ತಿಗೆ ತಕ್ಕಂತೆ ಸಮಸ್ಯೆಗಳನ್ನು ಇದಿರಿಸುತ್ತಾರೆ, ಹೊಸದಾಗಿ ಹುಟ್ಟಿಸಿಕೊಂಡು ಪರಿಹಾರವನ್ನು 'ಹುಡುಕುತ್ತಾರೆ! ಏನೋ ಬರೆದೆ ಮರೆತು ಬಿಡಿ).'

ಸದ್ಯಕ್ಕೆ ಇಷ್ಟು ಸಾಕು.

ನಿಮಗೆ, ಸೋದರಿ ಜ್ಯೋತ್ಸ್ನಾರಿಗೆ ಆದರದ ವಂದನೆ, ಚಿ. ವಿಕಾಸ್‌ಗೆ ಒಲವು

ನಿಮ್ಮ

**ನಿರಂಜನ**

ಹೈದರಾಬಾದು
ತಾ: 9.5.2004

**ಶ್ರೀಮತಿ ಜ್ಯೋತ್ಸ್ನಾ ಅವರಿಗೆ**

ಡಾ. ಕೃಷ್ಣಾನಂದರ ಸಂಸ್ಮರಣ ಸಂಪುಟ - ಕಮ್ಮಟಿಗ - ನಿಮ್ಮಿಂದ ಗೌರವ ಪೂರ್ವಕವಾಗಿ ನನ್ನ ಕೈ ಸೇರಿದುದಕ್ಕೆ ವಂದನೆಗಳು.

ನನ್ನ ಚಿಕ್ಕ ಅಳಿಯ ಮತ್ತು ಮೊಮ್ಮಗಳು ಅವರ ಸಂಶೋಧನೆಯ ಪ್ರಬಂಧದ ಛಾಯಾ ಚಿತ್ರಗಳನ್ನು ಶ್ರೀ. ಕೃಷ್ಣಾನಂದರೇ ಮಾಡಿಕೊಟ್ಟರೆಂದೂ ಅವರೆಂದೂ ವಾಣಿಜ್ಯದ ವಿಚಾರವನ್ನು ಗಮನಿಸದೆ ಕೆಲಸದ ಅಚ್ಚುಕಟ್ಟಿಗೆ ಗಮನವಿಟ್ಟು, ಮಾಡಿಕೊಡುವುದರಿಂದ ಎಲ್ಲ ಸಂಶೋಧಕರೂ ಅವರನ್ನೇ ಹಿಡಿಯುವರೆಂದೂ ಕೇಳಿದ್ದೆ.

ಕೆಲವು ವರ್ಷಗಳ ಹಿಂದೆ ಉದಯ ಟಿ.ವಿ.ಯಲ್ಲಿ ನಿಮ್ಮ ಮತ್ತು ಡಾ. ಕೃಷ್ಣಾನಂದ ಕಾಮತರ ಪರಿಚಯ ಕಾರ್ಯಕ್ರಮವನ್ನು ನೋಡಿದಾಗ ಶ್ರೀಮತಿ ಶೈಲಜಾ ಅವರು ಡಾ. ಕೃಷ್ಣಾನಂದರನ್ನು ಹೆಚ್ಚಾಗಿ ಪರಿಚಯಿಸಿದರೇ ಹೊರತು ಡಾ. ಜ್ಯೋತ್ಸ್ನಾ ಅವರ ಪರಿಚಯವನ್ನು ಹೆಚ್ಚಾಗಿ ಮಾಡಿಕೊಡಲಿಲ್ಲವೆಂಬ ಭಾವನೆ ನನಗೆ ಉಂಟಾಗಿತ್ತು. ಈಗ ಡಾ. ಕೃಷ್ಣಾನಂದರ, ಆಪ್ತೇಷ್ಟರ ಆತ್ಮೀಯ ಲೇಖನಗಳನ್ನು ನೋಡುತ್ತಾ ಹೋದಂತೆ ಅವರ ಸಾಹಿತ್ಯಲೋಕ, ಎಂಬುದು ನನ್ನ ಊಹೆಗೆ ಮೀರಿದುದು ಎಂದು ಅರ್ಥವಾಯಿತು.

ಡಾ. ಕೃಷ್ಣಾನಂದರ ವಿಷಯವಾಗಿ ಒಬ್ಬೊಬ್ಬರ ವಿಚಾರ ಶ್ರೇಣಿಗಳನ್ನು ಓದುತ್ತಿದ್ದಂತೆ ಅವರು ನಮಗೆ ಹತ್ತಿರ ಹತ್ತಿರವಾಗುತ್ತಿದ್ದಂತೆ ಭಾಸವಾಗುತ್ತದೆ. ನಮ್ಮ ನಿಮ್ಮ ಕುಟುಂಬಗಳ ಸಾಮ್ಯವೆಂದರೆ ನಿಮಗೆ ಒಬ್ಬ ಮಗ ಹುಟ್ಟಿ ಎಷ್ಟೋ ವರ್ಷಗಳಾದ ಮೇಲೆ ಸ್ಥಿರಪಟ್ಟಿರಿ. ನಾವು ಆರು ಮಕ್ಕಳಾದ ಮೇಲೆ ಹೈದರಾಬಾದಿನಲ್ಲಿ ಸ್ಥಿರಪಟ್ಟೆವು. ನೀವಿಬ್ಬರೂ ಬಹಳ ವಿದ್ಯಾವಂತರಾದರೂ ಸರಳ ಜೀವನಕ್ಕೆ ಮಾರು ಹೋದಿರಿ. ನಮ್ಮ ವಿಚಾರದಲ್ಲೂ ಅಷ್ಟೆ. ಯಾರೋ ಹೇಳುತ್ತಿದ್ದರು "ಸರಸ್ವತಿ ನಿಮಗೆ ಅಷ್ಟು ಹತ್ತಿರವಾದರೂ ಲಕ್ಷ್ಮೀ ದೂರನಿಂತು ನೋಡುತ್ತಿದ್ದಾಳೆ" ಎಂದು, ಅದು ನಿಮಗೂ ಅನ್ವಯಿಸುವುದೆಂದು ಭಾವಿಸುತ್ತೇನೆ. ಆರಕ್ಕೆ ಏರಲಿಲ್ಲ. ಮೂರಕ್ಕೆ ತಗ್ಗಲಿಲ್ಲ. ಅದರಿಂದಲೇ ನಾವೂ ನಮ್ಮ ಮಕ್ಕಳೂ ಸರಳ ಜೀವನಕ್ಕೇ ಅಂಟಿಕೊಂಡಿದ್ದೇವೆ.

ಡಾ. ಕೃಷ್ಣಾನಂದರ ವಿದ್ಯೆ ಮತ್ತು ಪದವಿಗೆ ತಕ್ಕ ಉದ್ಯೋಗವು ಭಾರತದಲ್ಲಿ ಸಿಕ್ಕಿದ್ದರೆ ಅಥವಾ ಅವರು ಹಣಕ್ಕೇ ಮಹತ್ವ ಕೊಟ್ಟು ಅಮೆರಿಕಕ್ಕೆ ಹಿಂತಿರುಗಿ ಹೋಗಿದ್ದರೆ

ಸುಖದ ಸುಪ್ಪತ್ತಿಗೆಯಲ್ಲಿ ಓಲಾಡಬಹುದಾಗಿತ್ತು. ಆದರೆ ಸುಖ ಸಂತೋಷವನ್ನು ಕೊಡುವುದು ಹಣವಲ್ಲ, ಮಾನಸಿಕ ತೃಪ್ತಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇದು ನಮಗೂ ಅನ್ವಯಿಸುತ್ತದೆ. ಆ ಸುಖದಿಂದ ವಂಚಿತರಾದರೂ ಕೃಷ್ಣಾನಂದರು ಅವರ ಐಚ್ಛಿಕ ಹವ್ಯಾಸವಾದ ಛಾಯಾಚಿತ್ರದ, ವಿಜ್ಞಾನದಲ್ಲಿ ಮುಳುಗಿ ನೂರಾರು ಸಂಶೋಧಕರಿಗೆ ನೆರವಾಗಿ ಅವರ ಆತ್ಮವರ್ಗಕ್ಕೆ ಸೇರಿ ಮರೆಯಲಾರದ ನಂಟರಾಗಿದ್ದಾರೆ. ನಾಗೇಶ ಶಾನುಭಾಗ (ಕ. ಪುಟ 43) ಹೇಳಿರುವಂತೆ "ಅಮೇರಿಕೆಯಲ್ಲಿ ಸದ್ಯ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ವಿಕಾಸನಿಗೆ, ಕಾಮತ್ ಡಾಟ್‌ಕಾಂ" ನಿರ್ಮಿಸುವಂತೆ ಪ್ರೇರಣೆ ನೀಡಿ ನಮ್ಮ ದೇಶದ, ನಾಡಿನ ಸಂಸ್ಕೃತಿ, ಪರಿಸರ, ಜೀವನಶೈಲಿ, ತಿನಿಸು - ಉಣಿಸುಗಳ ಪರಿಚಯ ಒದಗಿಸುವ ಅವಿಸ್ಮರಣೀಯ ಕಾರ್ಯವನ್ನು ಕೈಗೊಂಡಿದ್ದರು. ಈ "ಡಾಟ್‌ಕಾಮ್" ಜಾಲ ಇಡೀ ಅಮೇರಿಕಾ, ಯೂರೋಪುಗಳಲ್ಲಿ ಬಹು ಜನಪ್ರಿಯಗೊಂಡಿದ್ದು ವಿದೇಶಿಯರಿಗೆ ಈ ಮೂಲಕ ಅಪ್ಪಟ ಭಾರತೀಯ ಸಂಸ್ಕೃತಿಯ ಪರಿಚಯ ನೀಡಿದ್ದಾರೆ". ಅದರಲ್ಲಿ ನೀವೂ ತೊಡಗಿ ಭಾಗಿಯಾಗಿದ್ದೀರಿ, ಇದಕ್ಕಿಂತ ದೊಡ್ಡ ಸಮಾಜ ಅಥವಾ ದೇಶ ಸೇವೆ ಬೇಕೇ?

ಹಿಂದೊಮ್ಮೆ ನೀವು ನನಗೆ "ಸಂಸಾರದಲ್ಲಿ ಸ್ವಾರಸ್ಯ" ಪುಸ್ತಕವನ್ನು ಕೊಟ್ಟಾಗ ನಾನು ನನ್ನ 72 ವರ್ಷಗಳ ದಾಂಪತ್ಯ ಜೀವನದಲ್ಲಿ ಕಂಡುಕೊಂಡ "ಸಮರಸ" ದ ವಿವರಣೆಯನ್ನು ಕೊಟ್ಟಿದ್ದೆ. ಅದು ನಿಮಗೆ ಜ್ಞಾಪಕವಿರಬಹುದು. ದಾಂಪತ್ಯ ಜೀವನದ ಕಾಲವನ್ನು ಮೂರು ಭಾಗವಾಗಿ ವಿಂಗಡಿಸಿದರೆ ಮೊದಲ ಭಾಗದಲ್ಲಿ 'ಸಮರಸ' ದ ಮಕಾರಲೋಪವಾಗಿ ಉಳಿದುದು ಮುಖ್ಯವಾಗುತ್ತದೆ. ಎರಡನೆಯ ಕಾಲ ಸಮರಸವಾಗುತ್ತದೆ. ಮೂರನೆಯ ಕಾಲ 'ಸರಸ' ದ ಮೊದಲನೆಯ ಸಕಾರಕ್ಕೆ "ವಿ" ಕಾರ ಆದೇಶವಾಗಿ ಬಂದರೂ ಬಿಡಲಾರದ ಬೆಸುಗೆಯಾಗಿರುತ್ತದೆ. ನಿಮ್ಮ ದಾಂಪತ್ಯದ ಮೊದಲನೆಯ ಕಾಲವೆಲ್ಲ ಪತ್ರ, ವ್ಯವಹಾರದ ದಾಂಪತ್ಯ ಜೀವನವೇ ಆಗಿ ಅವರ ಅಲೆಮಾರಿತನದ, ಒಂಟಿಜೀವನದಿಂದ ನಿಂತ ನೆಲೆಯಲ್ಲಿ ಅಲ್ಲಿಯ ಜನರಲ್ಲಿ ಮಿಳಿತರಾಗಿ ಆ ಜನಗಳ ಸಂಸ್ಕೃತಿ, ನಡೆ ನುಡಿಗಳು ಜಾತಿ, ಪದ್ಧತಿಗಳು ಎಲ್ಲವನ್ನೂ ಸೂಕ್ಷ್ಮ ದೃಷ್ಟಿಯಲ್ಲಿ ಪರಿಶೀಲಿಸುವ ಅವಕಾಶ ಸಿಕ್ಕಿ ಅವರಿಂದ ಕನ್ನಡ ಸಾಹಿತ್ಯಕ್ಕೆ ಒಂದು ವಿಶೇಷದ ಕೊಡುಗೆಯಾಯಿತೆಂದು ಭಾವಿಸುತ್ತೇನೆ. ಆದರೆ ನೀವು ಎರಡನೆಯ ಭಾಗಕ್ಕೆ ಬಂದು ಅನುಭವಿಸಿ ಮೂರನೆಯ ಭಾಗಕ್ಕೆ ಬರುವುದರಲ್ಲೇ ಪರಮಾತ್ಮನು ಕೃಷ್ಣಾನಂದರನ್ನು ಸೆಳೆದುಕೊಂಡಿದ್ದು ಬಹುದುಃಖದ ವಿಚಾರವಾಯಿತು.

ಡಾ. ಕೃಷ್ಣಾನಂದರು ನಮ್ಮ ಯಜಮಾನರಿಗಿಂತ 25 ವರ್ಷಗಳಷ್ಟು ಚಿಕ್ಕವರು.

ಆದರೂ ಆ ಹಿಂದಿನ ಕಾಲದವರ ಅನೇಕ ಅಭ್ಯಾಸಗಳು ಇವರಲ್ಲೂ ಕಂಡು ಬಂದಿದ್ದು ನನಗೆ ಆಶ್ಚರ್ಯವಾಗುತ್ತದೆ. ಉದಾಹರಣೆಗೆ - ಹುಡುಗರ ಆಟದ ಚೆಂಡನ್ನು ಹಿಂತಿರುಗಿಸಿಕೊಟ್ಟು ಮತ್ತೆ ಮತ್ತೆ ಕಿಟಕಿ ಗಾಜುಗಳನ್ನು ಒಡೆಸಿಕೊಳ್ಳಬಾರದೆಂದು ಹಿಂದಕ್ಕೆ ಕೊಡದೆ ಇರುವುದು. ಪುಸ್ತಕಗಳನ್ನು ಕೊಡಬೇಕಾದರೆ ಬಹಳ ಹಿಂದೆ ಮುಂದೆ ಯೋಚಿಸುವುದು. ಆದಷ್ಟೂ ಕಾಲು ನಡಿಗೆಯಲ್ಲಿ ಹೋಗುವುದು. ಬಂದೊಡನೇ ಲಕ್ಕೋಟೆ (ಕವರ್) ಕತ್ತರಿಸಿ ಅಂಟಿಸಿ ಚಿಕ್ಕ ಲಕ್ಕೋಟೆ ಮಾಡಿ ಉಪಯೋಗಿಸುವುದು., ಸಲ್ಲದ ಆಡಂಬರವನ್ನು ನಿಷೇಧಿಸುವುದು, ಹಿತಮಿತ ವ್ಯಯಮಾಡುವುದು. ಎಲ್ಲಕ್ಕಿಂತಲೂ ಹೆಚ್ಚಾಗಿ ಚಿ. ವಿಕಾಸನು ಅವರ ಬಾಪ್ಪಾರವರ ವಿಚಾರವಾಗಿ ಬರೆದಿರುವ ಲೇಖನದಲ್ಲಿ ಅವರ ಸಹನೆ, ಸರಳತೆ, ಔದಾರ್ಯದ ಒಂದು ಸಂದರ್ಭ. ಅವನು "ಡೆವಲಪ್‌ಮೆಂಟ್ ಟ್ಯಾಂಕರ್" ಒಡೆದ ಸಂದರ್ಭದಲ್ಲಿ ಡಾ. ಕಾಮತರು ತಳೆದ ಸಹನೆಗೆ ಸಮನಾಗಿ ನಮ್ಮ ಬಿ.ರಾ. ಅವರು ಕಷ್ಟಪಟ್ಟು ಗಳಿಸಿದ್ದ 20 ಸಾವಿರ ರೂಪಾಯಿ ದೇವಗಾತಿ ಮುಳುಗಿ ಹೋದ ಸಂದರ್ಭದಲ್ಲಿ ಸಮಾಧಾನವಾಗಿ "ಹೋಗಲಿ ಬಿಡು ಯಾವುದೋ ಋಣ ತೀರಿತು" ಎಂದುಬಿಟ್ಟರು.

ಡಾ. ಕೃಷ್ಣಾನಂದರ ಸಮಗ್ರ ಸಾಹಿತ್ಯವನ್ನು ನಾನು ಓದದಿದ್ದರೂ ಅವರ ಆತ್ಮೀಯರು, ಸ್ನೇಹಿತರು, ವಿದ್ವಾಂಸರು 'ಕಮ್ಮಟಿಗ' ದಲ್ಲಿ ಬರೆದಿರುವ ಮೆಚ್ಚುಗೆಯ ಲೇಖನಗಳನ್ನು ಓದಿದರೆ ಅವರ ಸಮಗ್ರ ಸಾಹಿತ್ಯದ ಪರಿಚಯವಾದಂತಾಗುವುದು. ಅವರ ಉತ್ತರ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಣವನ್ನು ಓದಿದಾಗ ನನ್ನ ಅನಿಸಿಕೆ - ಆಡು ಮುಟ್ಟದ ಸೊಪ್ಪಿಲ್ಲ ಎನ್ನುತ್ತಾರೆ. ಆದರೆ ಆಡು ಮುಟ್ಟದ ಸೊಪ್ಪು ಎಂಬುದೂ ಒಂದಿದೆ. ಆದರೆ ಡಾ. ಕೃಷ್ಣಾನಂದರ ವಿಚಾರವಿಮರ್ಶೆಗೆ ಸಿಕ್ಕದ ಉತ್ತರ ಕರ್ನಾಟಕದ ಹೊನ್ನಾವರದ ವಿಷಯ, ವಿಚಾರ ಒಂದೂ ಇಲ್ಲವೆಂದು ಭಾವಿಸುತ್ತೇನೆ. ಒಬ್ಬ ಕನ್ನಡ ಸಾಹಿತಿಯ ಅಧ್ಯಕ್ಷ ಭಾಷಣವಾಗಿದ್ದರೆ, ಭಾಷೆ, ಸಾಹಿತ್ಯ, ಇತಿಹಾಸ, ಪ್ರಾಚೀನತೆ ಇವುಗಳನ್ನೇ ಕೇಳುತ್ತಿದ್ದೆವು. ಆದರೆ ಶ್ರೀ ಕೃಷ್ಣಾನಂದರ ಭಾಷಣದಲ್ಲಿ ಒಬ್ಬ ಸಂಶೋಧಕನ ಶ್ರದ್ಧೆ, ವಿಜ್ಞಾನಿಯ ಬುದ್ಧಿಶಕ್ತಿ, ಕಲೆಗಾರನ ತೀಕ್ಷ್ಣದೃಷ್ಟಿ ಎಲ್ಲವೂ ಅದರಲ್ಲಿ ಐಕ್ಯವಾಗಿವೆ. ಅದರಲ್ಲೂ ಪ್ರಾಣಿ ಪಕ್ಷಿಗಳು ವಿಚಾರ ಪ್ರಾಣಿಶಾಸ್ತ್ರ ಗಂಧವೇ ಇಲ್ಲದ ನಮ್ಮಂಥವರಿಗೆ ಆ ಪ್ರಾಣಿ ಪಕ್ಷಿಗಳ ತಮಗೆ ತೊಂದರೆ ಕೊಡುವ ಕ್ರಿಮಿಕೀಟಗಳನ್ನು ತಾವೇ ನಿವಾರಣೆ ಮಾಡಿಕೊಳ್ಳುವ ಬಗೆ ಇವುಗಳು ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡುವುದು. ಡಿ.ಜಿ. ಮಲ್ಲಿಕಾರ್ಜುನ (ಕ-ಪು. 65) ಅವರು ಹೇಳಿರುವಂತೆ ಡಾ. ಕೃಷ್ಣಾನಂದರು "ವೈಜ್ಞಾನಿಕ ಚಿತ್ರಕಾರರೋ, ಪರಿಸರ ಪ್ರೇಮಿಯೋ, ಪ್ರವಾಸಕಥನಕಾರರೋ, ಸಾಹಿತಿಯೋ, ಕೀಟಶಾಸ್ತ್ರ ಪಂಡಿತರೋ, ಪತ್ರಮಿತ್ರರೋ, ಚಿತ್ರಕಾರರೋ, ವಿದೇಶದಲ್ಲಿ ಅತ್ಯುತ್ತಮ ಅವಕಾಶಗಳಿದ್ದರೂ ಓದಿ ಭಾರತಕ್ಕೇ ಬಂದ ದೇಶ ಭಕ್ತರೋ!"

ಎಲ್ಲವನ್ನೂ ಅಳವಡಿಸಿಕೊಂಡಿದ್ದ ಶಿಸ್ತಿನ ಸಿಪಾಯಿ. ಸಮಜೋಡಿಯಾದ ನಿಮ್ಮನ್ನು ಬಿಟ್ಟು ನನ್ನ ದೃಷ್ಟಿಯಲ್ಲಿ ಈ ಚಿಕ್ಕ ವಯಸ್ಸಿನಲ್ಲಿ ಆ ಪ್ರಾಣಪಕ್ಷಿ ಹೇಗೆ ಹಾರಿ ಹೋಯಿತೋ ಏನೋ! ಎಲ್ಲವೂ ವಿಧಿ ಲಿಖಿತ.

ಶ್ರೀಮತಿ ಜ್ಯೋತ್ಸ್ನಾ ಅವರೇ, ನೀವೇ, ಅನೇಕ ಬರವಣಿಗೆಯ ಕೆಲಸವನ್ನು ಹವಣಿಸಿಕೊಳ್ಳಲು ಸಮರ್ಥರಾಗಿದ್ದೀರಿ. ಅದರ ಜೊತೆಗೆ ನಿಮ್ಮ ಕುಟುಂಬದ ವೆಬ್‌ಸೈಟಿಗೆ ಲೇಖ ಬರೆಯುವ ಹೊಣೆ ನಿಮ್ಮದಾಗಿದೆ. ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ನೀವು ನನಗಿಂತ ವಯಸ್ಸಿನಲ್ಲಿ ಬಹಳ ಬಹಳ ಚಿಕ್ಕವರು. ಮುಂದೆ ಅನೇಕ ವರ್ಷಗಳು ಕನ್ನಡ ತಾಯಿಯ ಸೇವೆ ಸಲ್ಲಿಸಬೇಕಾಗಿದೆ. ನಿಮಗೆ ಚಿ|| ವಿಕಾಸನಾದರೂ ಇಲ್ಲೇ ಇದ್ದಿದ್ದರೆ! ಎಂಬು ಯೋಚನೆ ಬರದಿಲಾರದು - ಮಾತೃ ಹೃದಯ. ಒಂಟಿಯಾದೆನೆಂದು ತಲೆಯ ಮೇಲೆ ಕೈ ಹೊತ್ತು ಕೂಡಬೇಕಾಗಿಲ್ಲ. ನಿಮ್ಮ ಬುದ್ಧಿವಿಕಾಸವೂ ಶಾರೀರಿಕ ಆರೋಗ್ಯ ಭಾಗ್ಯವೂ ಸಮತೋಲನವಾಗಿ ಅನೇಕ ವರ್ಷಗಳು ನಿಮ್ಮಿಂದ ಕನ್ನಡ ತಾಯಿಯ ಸೇವೆ ಮಾಡಿಸಿಕೊಳ್ಳುವಂತೆ ಭಗವಂತನು ಕಾಪಾಡಲಿ ಎಂದು ಹಾರೈಸುತ್ತೇನೆ. ನನ್ನ ಕಣ್ಣು ಮಂಜಾಗುತ್ತಿದ್ದರೂ ನಿಮ್ಮ 'ಕಮ್ಮಟಿಗ' ದ ಆಕರ್ಷಣೆ ನನ್ನನ್ನು ಓದಿಸಿದೆ. ಅದಕ್ಕೆ ನಿಮಗೆ ಮತ್ತೊಮ್ಮೆ ಹೃತ್ಪೂರ್ವಕ ವಂದನೆಗಳು.

ವಿಶ್ವಾಸವಿರಲಿ

**- ಎಚ್.ವಿ. ಸಾವಿತ್ರಮ್ಮ**

**S.H. NAYAK**
**B-301,**
**Manjunath Apartments,**
**Sant Namdev Path,**
**Dombivli (East) PIN- 421 201**

**31st December 1992**

ಪ್ರಿಯ ಕೃಷ್ಣಾನಂದ,

ಹೊಸ ವರುಷವು ನಿಮಗೆ ಸುಖ, ಶಾಂತಿ ಮತ್ತು ಸಮಾಧಾನಗಳು ಜೊತೆಗೆ ನಿಮ್ಮಲ್ಲಿಯ ಸಾಹಿತಿಗೆ ಹೊಸ ಹುಮ್ಮಸವನ್ನೂ ನೀಡಲೆಂದು ಬಯಸುವೆನು.

ಇದೀಗ ನಾನು ನಿಮ್ಮ "ಪ್ರೇಯಸಿಗೆ ಪತ್ರಗಳು" ಓದಿ ಕೆಳಗಿಟ್ಟಿರುವೆನು. ಕೆಲವು ಅಧ್ಯಾಯಗಳನ್ನು ಇನ್ನೊಮ್ಮೆ ಓದುವ ಬಯಕೆ ಇದ್ದುದರಿಂದ 'ಓದಿ ಮುಗಿಸಿದೆನು' ಎನ್ನಲಿಲ್ಲ. 'ಓದಿದೆನು' ಎನ್ನುವುದಕ್ಕಿಂತ 'ಅನುಭವಿಸಿದೆನು' ಎಂದರೆ ವಾಸ್ತವಿಕತೆಗೆ ಸನಿಹ. ನಿಮ್ಮ ಈ ಪುಸ್ತಕ ನನಗೆ ತುಂಬಾ ಸೇರಿತು.

ನಿಮ್ಮ ಸಹಧರ್ಮಿಣಿಯವರು ಬರೆದ 'ಮುನ್ನುಡಿ' ಯು ಒಂದು ತೂಕ ಹೆಚ್ಚೇ ಸೇರಿತು ಎಂದರೆ ಅವರಿಗೆ ಆಗುವ ಆನಂದಕ್ಕಿಂತ ತೂಕ ಹೆಚ್ಚು ಅನಂದ ನಿಮಗೇ ಆಗಬೇಕಲ್ಲವೆ? ಅದನ್ನು ನಾನು ಎರಡು ಬಾರಿ ಓದಿದೆನಷ್ಟೇ ಅಲ್ಲ ಆದರ ಸಾರವನ್ನು ಕೊಂಕಣಿಯಲ್ಲಿ ನನ್ನ ಸಹಧರ್ಮಿಣಿಗೆ ಹೇಳಿ ಹಿಗ್ಗಿದೆನು. ಅವಳಿಗೂ ಆನಂದವಾಯ್ತು.

ಹೋದ ವಾರ ನಾನು ನಿಮ್ಮಲ್ಲಿಗೆ ಬಂದಾಗ ನಿಮ್ಮಿಬ್ಬರನ್ನು ನನಗೆ ನೋಡಲು, ಮಾತನಾಡಲು ಸಿಕ್ಕಿದ್ದು ನನ್ನ ಭಾಗ್ಯವೆಂದು ತಿಳಿಯವೆನು. ನಾಲ್ಕು ದಶಕಗಳ ನಂತರ ನಿಮ್ಮ ಭೆಟ್ಟಿಯಾದಾಗ ನನಗೆ ಆದ ಅನಂದಕ್ಕೆ ಮಿತಿಯೇ ಇರಲಿಲ್ಲ. ನಿಮ್ಮ ಜೊತೆ ಸವಿದ ನಾಲವತ್ತು ರಸ ನಿಮಿಷಗಳಲ್ಲಿ ನಾಲ್ಕು ದಶಕಗಳು ತುಂಬಿ ತುಳುಕುತ್ತಿದ್ದವು. ನಾನು ಮೈ ಮರೆತೇ ಮಾತನಾಡುತ್ತಿದ್ದೆನು. ಫೋನಿನ ಮೇಲಾದ ಸಂಭಾಷಣೆಯ ಸಮಯದಲ್ಲಿ ಹುಟ್ಟಿದ ಅತ್ಮೀಯತೆ ಭೆಟ್ಟಿಯಲ್ಲಿ ತುಂಬಿ ತುಳುಕಲಾರಂಭಿಸಿತು. ಮನಸ್ಸಿಲ್ಲದ ಮನಸ್ಸಿನಿಂದ ನಿಮ್ಮ ಮನೆ ಬಿಡಬೇಕಾಯಿತು.

ನಿನ್ನ ಮನೆ ಬಿಟ್ಟು ಹೊರ ಬೀಳುವಾಗ ನನ್ನ ಮನಸ್ಸಿನಲ್ಲಿ ಮೂಡಿದ ವಿಚಾರವೆಂದರೆ, ನೀವಿಬ್ಬರೂ ಬಲು ಭಾಗ್ಯವಂತರು. ಆಗಲೇ ಯಾಕೆಂದು ಕೇಳಿದರೆ ಹೇಳಲು ವೇಳೆ ತಾಗ ಬಂದಿತ್ತು. ನಿನ್ನ 'ಪ್ರೇಯಸಿಗೆ ಪತ್ರಗಳು ಮತ್ತು ಸೌ।। ಜ್ಯೋತ್ಸ್ನಾ ಬಾಯಿಯವರು ಬರೆದ ಮುನ್ನುಡಿ ಓದಿ ಅದ ಮೇಲೆ ನಾನು ಅದನ್ನು ಹೆಚ್ಚು

ಸ್ಪಷ್ಟವಾಗಿ ಮತ್ತು ಸಂಕ್ಷಿಪ್ತವಾಗಿ ಹೇಳಬಲ್ಲೆ. ರುಕ್ಮಿಣಿಯಲ್ಲೇ ರಾಧೆಯನ್ನು ಕಾಣುವ ಮತ್ತು ಪಡೆಯುವ ಭಾಗ್ಯ ಕೆಲವರದೇ ಪಾಲಿಗೆ ಬರುತ್ತದೆ. ಈ ಕೆಲವರಲ್ಲಿ ನೀನೊಬ್ಬನೆಂದು ನಾನು ನಿನಗೆ ಭಾಗ್ಯವಂತನೆನ್ನುವೆ.

'ಕೃಷ್ಣಾನಂದ' ನಲ್ಲಿ 'ಕೃಷ್ಣ' ನಿದ್ದರೂ ನಡೆವಳಿಕೆಯಲ್ಲಿ ರಾಮನಂಥ ಜೀವನ ಸಾಥಿ ದೊರೆತುದು ನಿಮ್ಮವಳ ಭಾಗ್ಯವಲ್ಲವೆ? ಇವು ಹೊಗಳಿಸಲು ಬರೆದ ವಾಕ್ಯಗಳಲ್ಲ ಹೃದಯದಿಂದ ಮೂಡಿದವುಗಳು.

ನಾನು ಇನ್ನೊಮ್ಮೆ ನಿಮಗೆ ಭೇಟಿಯಾಗುವ ದಾರಿಯನ್ನು ಕೂಂಡುಕೊಳ್ಳಬೇಕೆಂದಿರುವೆನು. ಇದರಲ್ಲಿ ದೊಡ್ಡಸ್ತಿಕೆ ಅಥವಾ ವ್ಯವಹಾರವನ್ನು ಕಾಣದೇ ಸಭ್ಯತೆಯನ್ನು ಗುರುತಿಸಬೇಕಾಗಿ ಬಯಸುವೆನು.

ನಿಮ್ಮ ವಿಕಾಸನ ವಿಕಾಸದ ವಿಷಯದಲ್ಲಿ ಅರಿತುಕೊಳ್ಳುವ ಬಯಕೆ. **Lec Iacocca** (ಲೆಕ್ ಆಯಾಕೊಕಾ) ಏನನ್ನುತ್ತಾರೆ ಗೊತ್ತೆ? **"If you win the whole world and are unable to bring up your children properly, you are a flop"** ("ನೀನು ಇಡಿ ಪ್ರಪಂಚವನ್ನೇ ಗೆದ್ದರೂ, ನಿನ್ನ ಮಕ್ಕಳ ಪಾಲನೆ ಸರಿಯಾಗಿ ನಡೆಯದಿದ್ದರೆ ನಿನ್ನ ಬಾಳು ನಿರರ್ಥಕ!")ನಿಮ್ಮ ಪುತ್ರ ರತ್ನನಾದ ವಿಕಾಸನು ಕನ್ನಡ, ಕೊಂಕಣಿ ಮತ್ತು ಇಂಗ್ಲಿಷ್ ಭಾಷೆಗಳ ಮೇಲೆ ಸಮನಾದ ಪ್ರಭುತ್ವ ಪಡೆದಿದ್ದಾನೆಂದು ಓದಿ, ತಿಳಿದು ಬಹಳೇ ಆನಂದವಾಯಿತು. ಅವನ ಮಾತಾಪಿತರಿಗೆ ನನ್ನ ಅಭಿನಂದನೆಗಳು.

ನಿಮ್ಮೆಲ್ಲರಿಗೂ ಹೊಸ ವರುಷ ಹೊಸ ಹರುಷ ತರಲಿ ಮತ್ತು ಸಾಹಿತ್ಯ ಶಾರದೆಯ ಸೇವೆ ನಿಮ್ಮಿಂದ ಮತ್ತಷ್ಟು ಆಗಲಿ ಎಂದು ಕೋರುವ

ನಿನ್ನ ಹಿತೈಷಿ ಮತ್ತು ಗೆಳೆಯ
**- ಶಿಹ ನಾಯಕ**

ಬೆಂಗಳೂರು
ತಾ: ೧೮.೧.೧೯೯೪

**ಡಾ. ಕಾಮತ್ ಅವರಿಗೆ ನಮಸ್ಕಾರಗಳು**

ನೀವು ಆದರದಿಂದ ಕಳಿಸಿದ 'ಹೊಸ ವರ್ಷದ ಶುಭಾಶಯಗಳು' ತಲುಪಿದೆ. ನಿಮಗೂ ನಿಮ್ಮ ಪರಿವಾರಕ್ಕೂ ಶುಭಾಶಯಗಳನ್ನು ಕೋರುತ್ತೇನೆ. 'ಮಧ್ಯಪ್ರದೇಶದ ಮಡಿಲಿನಲ್ಲಿ' ಓದಿದೆ. ಆದಿವಾಸಿಗಳ ಬದುಕಿನ ವೈವಿಧ್ಯತೆ, ಸಂಕೀರ್ಣ ನಾಗರಿಕ ವ್ಯವಸ್ಥೆಯ ಪ್ರಭಾವದಲ್ಲಿ ಅವರು ಪಡುತ್ತಿರುವ ಬವಣೆ, ನಾಗರಿಕ ಜಗತ್ತಿನ ಕಪಟ ಎಲ್ಲಾ ಮನಮುಟ್ಟುವಂತೆ ಚಿತ್ರಿತವಾಗಿದೆ. ಮಧ್ಯಪ್ರದೇಶದ ಬಗ್ಗೆ ಇದು ನಿಮ್ಮ ಮೂರನೇ ಪುಸ್ತಕವಾದರೂ ವಿಷಯಗಳ ಆಯ್ಕೆ, ವಿಚಾರಗಳ ಸರಣಿ ಹೊಸತು. ಅಪರಿಚಿತ ಜಗತ್ತಿಗೆ ಕಾಲಿರಿಸಿದಾಗ ಎದುರಾಗುವ ಸಂಗತಿ, ಸನ್ನಿವೇಶಗಳನ್ನು ನೀವು ಗ್ರಹಿಸಿ, ಅರ್ಥೈಸುವ ಬಗೆ, ನಿರೂಪಣೆಯಲ್ಲಿ ನೀವು ಪ್ರಯೋಗಿಸುವ ಹಿತವಾದ ತಿಳಿ ಹಾಸ್ಯದ ಲೇಪ, ಸೂಕ್ಷ್ಮ ದೃಷ್ಟಿ, ಸಂಶೋಧನಾ ಪರಿಣತಿ ಎಲ್ಲಾ ವಿಶಿಷ್ಟವಾಗಿವೆ. ಆದಿವಾಸಿಗಳ ಬದುಕನ್ನು ಅರಿಯಲು ನೀವು ತೋರುವ ಪ್ರಾಮಾಣಿಕ ಕಳಕಳಿಯ ಒಂದಂಶದಷ್ಟಾದರೂ ಆದಿವಾಸಿ ಸಂಶೋಧನಾ ಕೇಂದ್ರದ ಸಿಬ್ಬಂದಿಗೆ ಇದ್ದಿದ್ದರೆ! ಎಂದು ಓದುಗರಿಗೆ ಅನಿಸದಿರದು. ಆದಿವಾಸಿಗಳ ಇಂದಿನ ಚಿತ್ರವತ್ತಾದ ಬದುಕಿನ ಒಂದು ಪಾರ್ಶ್ವದ ದರ್ಶನದೊಂದಿಗೇ ನಾಗರಿಕ ಜಗತ್ತಿನ ಕೃತ್ರಿಮತೆಯ ಬಗ್ಗೆಯೂ ಒಂದು ಇಣಕುನೋಟ ಲಭ್ಯವಾಗುತ್ತದೆ. ಆದಿವಾಸಿಗಳೇ ಅಲ್ಲದೆ ನೀವು ಸಾಂದರ್ಭಿಕವಾಗಿ ಸಂಪರ್ಕಿಸುವ ಅಂಗಡಿಕಾರ, ಹೋಟೆಲ್ ಮಾಲಿಕ ಮುಂತಾದ ಸಾಮಾನ್ಯ ವ್ಯಕ್ತಿಗಳು ಹಾಗೂ ಶರ್ಮ, ಕೌಸಲ್, ರುದ್ರಕುಮಾರ, ಮಾಂಜರೇಕರ್ ಕುಟುಂಬದವರು, ಕೇಕ್ರೆ ಮುಂತಾದವರ ವ್ಯಕ್ತಿ ಚಿತ್ರಣಗಳು ಆಕರ್ಷಕವಾಗಿವೆ. ಆದಿವಾಸಿಗಳ ಕಲೆಯ ಬಗ್ಗೆ ನಿಮ್ಮ ಅನಿಸಿಕೆ, ಟಿಪ್ಪಣಿಗಳು, ಲಹರಿಗಳು ತುಂಬಾ ಕುತೂಹಲಕರವಾಗಿವೆ. ಹಚ್ಚೆಯ ಬಗ್ಗೆ ನಿಮ್ಮ ವಿಚಾರಗಳನ್ನು ಓದಿದಾಗ ಆದಿವಾಸಿಗಳ ನಂಬಿಕೆ, ಧರ್ಮ, ವಿಶ್ವಾಸಗಳ ಪರಿಚಯವಾಗುವುದರೊಂದಿಗೆ ಅವರ ಕಲೆಯ ವಿವರಣೆಯೂ ಅಚ್ಚುಕಟ್ಟಾಗಿ ನಿರೂಪಿತವಾಗಿದೆ (ಹಚ್ಚೆಯ ರೇಖಾ ಚಿತ್ರಗಳು, ಬೇಟೆಯ ಪ್ರವೃತ್ತಿ ಆದಿಮಾನವನ ಕಲೆಯ ಮೇಲೆ ಪ್ರಭಾವ ಬೀರಿರುವುದರ ವಿಚಾರ ಸರಣಿಯನ್ನು ಓದುತ್ತಿದ್ದಂತೆ, ಅದೇ ಪ್ರವೃತ್ತಿ, ಎಂಬ ಆಧುನಿಕ ಕ್ರೀಡಾ ಸಂಸ್ಕೃತಿಗೂ ಮೂಲವಾಗಿದ್ದಿರಬಹುದೇ ಎಂಬ ಆಲೋಚನೆಯೂ ಬಂದಿತು.

ಘರೇವಾರ ಮೇಣದ ಅಚ್ಚಿನ ಕಲೆಯ ವರ್ಣನೆ, ಭೀಮ ಬೆಟಕಾದ ಆದಿಮಾನವನ ಕಲೆಯ ವಿಶ್ಲೇಷಣೆ, ಗೊಂಡರ ಸಂಸ್ಕೃತಿ, ನರ್ಮದೆಯ ಪ್ರಕೃತಿ

ಸೌಂದರ್ಯ, ಕೊರ್ಕುಗಳ ದುರ್ದೈವ, ಮಾವಾಶಿಯರ ರಸಿಕತೆ, ಸೌಂದರ್ಯ - ಹೀಗೆ ಎಷ್ಟೆಲ್ಲಾ ವಿಷಯಗಳನ್ನು ಎಷ್ಟೊಂದು ಅಚ್ಚುಕಟ್ಟಾಗಿ, ಆಕರ್ಷಕವಾಗಿ ನಿರೂಪಿಸಿದ್ದೀರಿ!

ಕ್ಯಾಮರಾ ಕಲೆಯೊಂದಿಗೆ ಬರವಣಿಗೆಯ ಕಲೆ ಮೇಳವಿಸಿರುವುದರ ಅಪರೂಪ ಶೈಲಿ ನಿಮ್ಮದು. ನಿಮ್ಮ ಉಳಿದ ಪ್ರವಾಸ ಕಥನಗಳಂತೆಯೇ ಈ ಪುಸ್ತಕದಲ್ಲೂ ಓದುಗರು ಇತಿಹಾಸ, ಭೂಗೋಳ, ಕಲೆ, ಸಂಸ್ಕೃತಿ ರಾಜಕೀಯ, ವಿಜ್ಞಾನ ಮುಂತಾದ 'ಬಹುಶಾಸ್ತ್ರ' ಸಂಸ್ಕಾರ ಸಾಹಿತ್ಯವನ್ನು ಓದುವ ಅಪರೂಪದ ಅವಕಾಶ ಪಡೆಯುತ್ತಾರೆ. ನಿಮ್ಮ ಉಗ್ರಾಣದಲ್ಲಿರುವ ಇತರ ವಸ್ತುಗಳೂ ಪುಸ್ತಕ ರೂಪದಲ್ಲಿ ಬೇಗ ಹೊರಬರಲಿ ಎಂದು ಆಶಿಸುತ್ತೇನೆ.

ನೀವು ತೆಗೆದ ನನ್ನ ಫೋಟೋ ತಲುಪಿದೆ. ತುಂಬಾ ಧನ್ಯವಾದಗಳು. ಒಮ್ಮೊಮ್ಮೆ ನಾನು ಹೇಗೆ ಕಾಣುತ್ತೇನೆ ಎಂದು ನನಗೇ ಸಂಭ್ರಮವಾಯಿತು!

ನಿಮ್ಮ ಪ್ರಭು
**(ಎಂ.ಎಸ್.ಕೆ. ಪ್ರಭು)**

**Thu, 19 Aug 2004**

From,
**MADAN PANDILA**
Madan_Pandila@yahoo.com

**Dear Vikas**

*Thank you for sending me 'Kamat's Potpouri'. It was quite interesting to me as I knew him very intimately during our stay in the College of Forestry in Syracuse. I am going to write something about our life in Syracuse, N.Y. and it may be of interest to you as well.*

*Kamat and me had many things in common, which brought us very close to each other. Both of us were Fulbright Scholarship - holders from India and were in the same College. I was in Forest Pathology Department and Kamat was in Forest Entomology. Both these departments were on the same floors of Bray Hall Building. One half was with Forest Entomology and the other with Forest Pathology. Bothu of us ised to spend long hours in the building for our studies and research. If I get bored, I will go to Kamat for a chat and vice versa. We had common interest in photography which we used in our studies as well. Both of use has full confidence and support form our departments. I also remember giving him my EXA camera for this bus tour of U.S.A. during the summer vacations. After his tour ended, Kamat gave me a good account of various laboratories and*

*Research Stations he visited. The interesting part was that in some places he got a royal treatment as they mistook him as a research scientist from India visiting U.A.S.! We differed in our out look in life. Kamat was very much contented with what he had and was centered with only one ambition that he will go back to India and will explore the field of entomology. I was more outoging, taking active part in various activities at the campus so much so that I was elected as President of India Student Association of Syracuse University in the very first year of joining the college.*

*In order to fulfil his dream of research in India, he asked one of the professor who was retiring, if he could get some literature and book from his library. The professor was so happy and appreciated Kamat's ambition and told him to take anything he can lay his hand on. Kamat spent a lot of time and money to post small packages of books by surface mail to India. My advice to Kamat was that he is mistaken about his future in India which he disagreed, After Kamat left for India, I did receive a letter from him that he is not happy the way in which he is treated here nad he is still looking for a job of his liking. The rest is history, Vikas, you know better. While studying in Syracuse, I had my family with me, my wife (Prem), my two sons (Sunil and Anil) and my third son (Amar) was born there in Syracuse. I stayed back here after my studies, for my future as well as for the future of my children. All my sons are set up in life very well.*

*Even now after retirement, I am still busy in Forestry research. I had been going to other countries as Advisor on Forestry Projects. I just came back from China in June on a Forestry Project. I will be of 80 yrs of age this year. Dear Vikas, I am really interested to know how you happen to be in U.A.S. and I will be interested to know your side of the story. Please send me your home address. With Love to all of you.*

**ಕೆ.ವಿ ಸುಬ್ಬಣ್ಣ :-** (೧೯೩೨) ಎಮ್.ಎ.; ನಾಡಿನ ಹಿರಿಯ ಚಿಂತಕರಲ್ಲಿ ಒಬ್ಬರು. ಲೇಖಕ, ನಾಟಕ ನಿರ್ದೇಶಕ, ಸಂಪಾದಕ - ಪ್ರಕಾಶಕ, ವಿಮರ್ಶಕರಾಗಿ ಬಹುಮುಖ ಪ್ರತಿಭೆ ಮೆರೆದವರು. ಏಷ್ಯದ ನೊಬೆಲ್ ಪುರಸ್ಕಾರವೆಂದೇ ಹೆಸರು ವಾಸಿಯಾದ **ಮ್ಯಾಗ್ಸೇಸೇ ಪ್ರಶಸ್ತಿ** ವಿಜೇತರು. ಕೃಷ್ಣಾನಂದ ಕಾಮತರ 'ನಾ ರಾಜಸ್ಥಾನದಲ್ಲಿ' ಇವರ ಅಕ್ಷರ ಪ್ರಕಾಶನದಿಂದ ಹೊರ ಬಂದಿದೆ. ಅನೇಕ ವರ್ಷ ಇವರು ನಡೆಸಿಕೊಂಡು ಬಂದ 'ಸಾಕ್ಷಿ' ತ್ರೈಮಾಸಿಕದಲ್ಲೂ ಕಾಮತರ ಹಲವಾರು ವೈಚಾರಿಕ ಲೇಖನಗಳು ಪ್ರಕಟವಾಗಿವೆ.

ಅಂಚೆ : ಹೆಗ್ಗೋಡು
(ಸಾಗರ-ಶಿವಮೊಗ್ಗ) - ೫೭೭೪೧೭

**ವಿ.ಜಿ. ಭಟ್ಟ :-** (೧೯೨೩-೧೯೯೧) ಎಮ್.ಎ.; ಖ್ಯಾತ ವಿಡಂಬನಾ ಕವಿ ಹಾಗೂ ಪ್ರಬಂಧಕಾರರು. ಖಾದಿ, ಗ್ರಾಮೋದ್ಯೋಗ ಖಾತೆಯಲ್ಲಿ ಉಚ್ಚ ಅಧಿಕಾರಿಯಾಗಿ ನಿವೃತ್ತರಾಗಿದ್ದರು.

ಬುರಕಿ ಕಿಷ್ಕಿಂದೆ, ತುಂಟನ ಪದಗಳು, ಅರಣ್ಯ ರೋದನ, ಪೆದ್ದಂ ಕತೆಗಳು ಮುಂತಾದವು ಇವರ ಕಾವ್ಯ ಕೃತಿಗಳು. 'ಉತ್ತರಕನ್ನಡ ಜೀವನ ಚಿತ್ರಗಳು' ಅತಿ ಅಪರೂಪದ ಸಮಾಜ ವಿಡಂಬನೆಯ ರಮ್ಯ ಚಿತ್ರಗಳನ್ನು ಹೊಂದಿದೆ. ತುಂಬ ಕಾಲ ಲೇಖನಿಗೆ ವಿರಾಮ ಕೊಟ್ಟು ೧೯೮೦ರಲ್ಲಿ ಪುನಃ ಬರೆಯಲಾರಂಭಿಸಿದರು. ಬಳಿಕ ಒಂಭತ್ತು ಕವನ ಸಂಕಲನಗಳನ್ನು ಹೊರತಂದರು. ೧೯೮೩ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಪಾತ್ರರಾದರು. 'ಗುಜರಿ ಗುತ್ತಿಗೆ' ಪದ್ಯವನ್ನು ಅವರ ಪ್ರಾರ್ಥನೆ (ಅಂತಿಮ) ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಕಾಮತರ ಆತ್ಮೀಯರು.

ವಿಳಾಸ : **4/1, Seema : Four Bunglow Road,
Andheri West , Mumbai-400 058.**

**ಡಾ. ವಿ.ಬಿ. ನಾಡಕರ್ಣಿ :-** (೧೯೩೦) ಎಮ್.ಎಸ್.ಸಿ., ಪಿಹೆಚ್.ಡಿ.; ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಜೀವಶಾಸ್ತ್ರ ಪ್ರಾಧ್ಯಾಪಕರಾಗಿ ನಿವೃತ್ತರಾಗಿ ಮುಂಬೈಯಲ್ಲಿ ನೆಲೆಸಿದ್ದಾರೆ. ಸಂದರ್ಶಕ ಸಂಶೋಧಕರಾಗಿ ಅಮೇರಿಕೆಯ ವಾಶಿಂಗ್ಟನ್ ಹಾಗೂ ವಾರ್ಸೆಸ್ಟರ್ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡಿದ್ದಾರೆ. ೨೦, ಪಿ.ಹೆಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ. ಫ್ಯಾಮಿಲಿ

ಪ್ಲಾನಿಂಗ್ ಅಸೋಷಿಯೇಶನ್ ಆಫ್ ಇಂಡಿಯದ ಉಪಾಧ್ಯಕ್ಷರಾಗಿ ೧೮ ವರ್ಷ ಕಾರ್ಯ ನಿರ್ವಹಿಸಿ ಹನ್ನೆರಡು ಪ್ರಾಜೆಕ್ಟ್‌ಗಳ ಮೇಲ್ವಿಚಾರಣೆ ಮಾಡಿದ್ದಾರೆ

ವಿಳಾಸ : **1, Green Acre,**
**Plot no 19, Amritvan**
**Goregaon (E) Mumbai-400 063**

**ಜೀನ್ ರೊಥ್ :-** (೧೯೧೭) ಕಾಮತರ ಸುಪ್ರಸಿದ್ಧ "ನಾನೂ ಅಮೇರಿಕೆಗೆ ಹೋಗಿದ್ದೆ" ಪುಸ್ತಕದಲ್ಲಿ ಕಾಣಿಸಿಕೊಂಡ ಲೇಖನಿಯು ಸ್ನೇಹಿತೆ. ಕಾಮತ ಕುಟುಂಬದೊಂದಿಗೆ ೪೦ ವರ್ಷಗಳ ಪತ್ರ - ಸ್ನೇಹವನ್ನು ಉಳಿಸಿಕೊಂಡು ಬಂದಾಕೆ. ರೊಥ್ ಕುಟುಂಬ, ಅಮೇರಿಕೆಯಲ್ಲಿ ಅಪರೂಪವಾಗಿ ಕಂಡು ಬರುವ ಕುಟುಂಬ. ವಾತ್ಸಲ್ಯದೊಂದಿಗೆ ಧಾರ್ಮಿಕ ಮೌಲ್ಯಗಳನ್ನು ಉಳಿಸಿಕೊಂಡು ಬಂದಿದೆ. ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳನ್ನು ಆಗಾಗ ಭೇಟಿ ಮಾಡುತ್ತ ಅವರ ಚಿತ್ರ ಮಾಹಿತಿಗಳನ್ನು ಒದಗಿಸುತ್ತ ಇರುವ ಜೀನ್, ಮಮತೆಯಲ್ಲಿ ಯಾವ ಭಾರತೀಯ ಮುತ್ತಜ್ಜಿಗೂ ಕಡಿಮೆ ಇಲ್ಲ!

ವಿಳಾಸ : **5362, Davidson Streeet (SE)**
**Albany (OR)**
**97322-7198, U.S.A.**

**ಡಾ. ವಿ.ಕೆ. ದೇಶಪಾಂಡೆ :-** (೧೯೩೮) ಎಮ್.ಎಸ್.ಸಿ. ಪಿಹೆಚ್.ಡಿ.; ಸ್ವತಃ ಕೃಷಿ ಮಾಡುತ್ತ 'ಕಮತಿಗ' ನೆಂದು ಹೆಮ್ಮೆ ಪಡುವ ಡಾ. ವಿನಾಯಕ ದೇಶಪಾಂಡೆ ಅವರು ಪ್ರಾಣಿಶಾಸ್ತ್ರದಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಿಂದ, ಡಾ. ವಿ.ಬಿ. ನಾಡಕರ್ಣಿ ಅವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ., ಪಡೆದಿದ್ದಾರೆ. ಕೆಲಕಾಲ ಅಮೇರಿಕದಲ್ಲಿದ್ದು ಬಂದವರು. ಕಾಮತರ ಸಹಪಾಠಿಯಾಗಿ ಸನಿಹದಿಂದ ಬಲ್ಲವರು. ಆರ್.ಎಲ್. ಕಾಲೇಜ (ಬೆಳಗಾಂವ) ದಲ್ಲಿ ಅಧ್ಯಾಪಕರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಗೌರವ ಪ್ರಾಧ್ಯಾಪಕರಾಗಿದ್ದರು.

ವಿಳಾಸ : ಹೆಂಬ್ಲಿಗಲ್ಲಿ
ಧಾರವಾಡ - ೫೮೦ ೦೦೧.

**ಹೂಗೊಪ್ಪಲು ಕೃಷ್ಣಮೂರ್ತಿ :-** (೧೯೫೦) ಎಮ್.ಎ. ಡಿಪ್(ಡಿ); ಪ್ರಾದೇಶಿಕ ಉಪನಿರ್ದೇಶಕರು, ಸಂಗೀತ ಮತ್ತು ನಾಟಕ ವಿಭಾಗ, ಭಾರತ ಸರ್ಕಾರ, ಬೆಂಗಳೂರು. ಕೆಲ ಕಾಲ ಫಿಲ್ಮ್ ಸೆನ್ಸರ್ ಬೋರ್ಡಿನ ವಿಶೇಷ ಅಧಿಕಾರಿ. ನಾಟಕ ಇವರ ಅಚ್ಚುಮೆಚ್ಚಿನ ಕ್ಷೇತ್ರ. ಬಹಳಷ್ಟು ಬಾನುಲಿ ರೂಪಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಮೈಸೂರು ಆಕಾಶವಾಣಿಯಲ್ಲಿದ್ದಾಗ ಹೆಸರಾಂತ ಸಾಹಿತಿ -

ಕಲಾವಿದರನ್ನೆಲ್ಲ ಆಮಂತ್ರಿಸಿ ಧ್ವನಿ ಮುದ್ರಣ ಮಾಡಿ ಇರಿಸಿದ್ದು ಇವರ ವಿಶೇಷ ಕೊಡುಗೆ

ವಿಳಾಸ : ಸಿ.ಬಿ.ಎಫ್.ಸಿ.
೪ನೇ ಮಹಡಿ, 'ಡಿ' ವಿಭಾಗ, ಕೇಂದ್ರಿಯ ಸದನ,
ಕೋರಮಂಗಲ, ಬೆಂಗಳೂರು-೫೬೦ ೦೩೪.

**ರವಿ ಹೆಗಡೆ :-** (೧೯೭೫) ಕರ್ನಾಟಕ ವಿಶ್ವವಿದ್ಯಾಲಯದಿಂದ ಎಮ್.ಎಸ್.ಸಿ. ಮಾಡಿ ಸದ್ಯ ಬೆಂಗಳೂರಿನ **NIMHANS** ದ ಫೆಲೊಶಿಪ್ ಪಡೆದು ಬಾಯೋಫಿಜಿಕ್ಸದಲ್ಲಿ ಡಾಕ್ಟರೇಟ್ ಅಧ್ಯಯನ ನಡೆಸಿದ್ದಾರೆ. ಇಂಡಿಯನ್ ಅಕಾಡೆಮಿ ಆಫ್ ಸೈನ್ಸ್‌ಸ್‌ದ ಶಿಷ್ಯ ವೃತ್ತಿ ಪಡೆದು 'ಕಡಲ ತೀರದ ಕಲ್ಬಂಡೆಗಳಲ್ಲಿ ಜೀವ ವೈವಿಧ್ಯ' ಎಂಬ ಪ್ರಬಂಧ ಬರೆದರು. ಪಶ್ಚಿಮ ಘಟ್ಟದ ಕಪ್ಪೆಗಳ ಶಾಸ್ತ್ರೀಯ ಅಧ್ಯಯನ ಕೈಕೊಂಡಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ವಿಶೇಷತಃ ಹೊನ್ನಾವರದ ಪರಿಸರ ರಕ್ಷಣೆಯಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಪೌರಪ್ರಜ್ಞೆ ಬೆಳೆಸಲು ಹೆಣಗುತ್ತಿದ್ದಾರೆ. ಜೀವವಿಜ್ಞಾನ ಹಾಗೂ ಪರಿಸರ ಕುರಿತಾದ ಇವರ ಎಂಭತ್ತು ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ವಿಳಾಸ : ಚಂದ್ರಭಾಗಾ
ಲಕ್ಷ್ಮೀನಾರಾಯಣನಗರ,
ಹೊನ್ನಾವರ - ೫೮೧ ೩೩೫
ಉತ್ತರ ಕನ್ನಡ ಜಿಲ್ಲೆ

**ಎಮ್.ಜೆ. ರಾಜೀವಗೌಡ :-** (೧೯೭೦) ಟಿ.ಸಿ.ಎಚ್; ತಾದೂರು (ಶಿಡ್ಲಘಟ್ಟ ತಾಲ್ಲೂಕು) ಪ್ರಾಥಮಿಕ ಶಾಲಾ ಶಿಕ್ಷಕರು ಸ್ವ-ಅಧ್ಯಯನ ಮಿಗಿಲಾದದ್ದು. ಮೈಸೂರು ಮುಕ್ತ ವಿಶ್ವವಿದ್ಯಾಲಯದ ಎಮ್.ಎ. ಪರೀಕ್ಷೆಗೆ ಸಿದ್ಧತೆ ನಡೆಸಿದ್ದಾರೆ. ಛಾಯಾಗ್ರಹಣ, ಓದು-ಬರಹ, ಚಾರಣಗಳು ಪ್ರೀತಿಯ ಹವ್ಯಾಸಗಳು, ಕನ್ನಡದ ಪ್ರಸಿದ್ಧ ಪತ್ರಿಕೆಗಳಿಗೆಲ್ಲ ಆಗಾಗ ಚಿತ್ರ-ಲೇಖನ ಬರೆಯುತ್ತ ಇರುತ್ತಾರೆ. ಮಕ್ಕಳ ಕಿರು ಹೊತ್ತಗೆಗಳನ್ನು ಅವರಿಂದಲೇ ಬರೆಸಿ ಪ್ರಕಟಿಸಿದ್ದಾರೆ. ಪ್ರಯೋಗಶೀಲರು.

ವಿಳಾಸ : ಶಿಡ್ಲಘಟ್ಟ ತ್ಲಾಲೂಕು,
ಕೋಲಾರ ಜಿಲ್ಲೆ,
ಮೇಲೂರು-೫೬೨ ೧೦೨

**ಡಾ. ಶ್ರೀವತ್ಸ ದೇಸಾಯಿ :-** (೧೯೪೬) ಎಮ್.ಬಿ.ಬಿ.ಎಸ್. ಎಫ್.ಆರ್.ಸಿ.ಎಸ್., ಎಫ್.ಆರ್.ಸಿ.ಜಡ್., **Rcophtch;** ಕಳೆದ ૩೦ ವರ್ಷಗಳಿಂದ ಇಂಗ್ಲೆಂಡಿನಲ್ಲಿ ನೆಲೆಸಿರುವ ನೇತ್ರತಜ್ಞರು ಖ್ಯಾತ ಇತಿಹಾಸಜ್ಞ ಹಾಗೂ

ಶಾಸನ ತಜ್ಞರಾಗಿದ್ದ ಡಾ. ಪಾಂಡುರಂಗರಾವ್ ಭೀ. ದೇಸಾಯಿ ಅವರ ಸುಪುತ್ರರು. ಕಾಮತ್ ವೆಬ್‌ಸೈಟ್ ನೋಡಿ ಮೆಚ್ಚಿಕೊಂಡು ತಾವಾಗಿ ಪತ್ರ ವ್ಯವಹಾರ ಪ್ರಾರಂಭಿಸಿ, ಕನ್ನಡ ನಾಡು - ನುಡಿಯ ಮಮತೆಯನ್ನು ಮೆರೆದಿದ್ದಾರೆ. ಸಂಪಾದಕರ ಆಗ್ರಹಕ್ಕೆ ಮಣಿದು ವೆಬ್ ಅಂತರ್ಜಾಲದಲ್ಲಿ ಆಕಸ್ಮಾತ್ ಲಭಿಸಿದ ಸ್ನೇಹ ಬೆಳೆಸುತ್ತ ಕಾಮತರ ಸ್ಮರಣೆಯನ್ನು ಆತ್ಮೀಯವಾಗಿ ತೋರ್ಪಡಿಸಿದ್ದಾರೆ.

ವಿಳಾಸ : **Mr. S.P. Desai. 7R.C.S.**
**Burnham Gloss**
**West Bessacar**
**Doncaster, DN4 7RE**
**Yorkshire England.**

**ಕೆ.ಜಿ. ಶ್ರೀಕಂಠದಾನಿ :-** (೧೯೮೩) ಬಿ.ಎಸ್.ಸಿ. ಯಲ್ಲಿ ಹೋದ ವರ್ಷ ಡಿಸ್ಟಿಂಕ್ಶನ್ ಪಡೆದು, ಸಸ್ಯಶಾಸ್ತ್ರದಲ್ಲಿ ಎಮ್.ಎಸ್.ಸಿ. ಮಾಡುತ್ತಿರುವ ಇವರ ಹವ್ಯಾಸಗಳು ಹಲವು. ಮೃದಂಗ ನುಡಿಸುತ್ತಾರೆ, ಹಾಡುತ್ತಾರೆ. ಹಲವು ಖ್ಯಾತ ಸಂಗೀತಗಾರರೊಟ್ಟಿಗೆ ನುಡಿಸಿದ್ದಾರೆ. ಛಾಯಾಗ್ರಹಣ, ಲೇಖನಗಳು ಪ್ರೀತಿಯ ಹವ್ಯಾಸಗಳು; ಕಿರಿಯ ವಯಸ್ಸಿನ ಇವರ ಮೌಲಿಕ ಚಿಂತನ ಬೆರಗುಗೊಳಿಸುವಂತಹದು. ಕಲೆ - ಸಂಗೀತ - ಸಾಹಿತ್ಯಗಳಲ್ಲಿ ಹೆಚ್ಚಿನ ಭರವಸೆ ಹುಟ್ಟಿಸಿರುವ ಯುವಕ.

ವಿಳಾಸ : 'ಕೈದಾಳ' ನಂ. ೨೦/೧,
೪ನೇ ಅಡ್ಡ ರಸ್ತೆ, ಮಾಗಡಿ ರಸ್ತೆ,
ಬೆಂಗಳೂರು - ೫೬೦ ೦೨೩.

**ಡಾ. ಕಮಲಾ ಹೆಮ್ಮಿಗೆ :-** (೧೯೫೨) ಎಮ್.ಎ. ಪಿಹೆಚ್.ಡಿ., ಕವಿತೆ, ಪ್ರಬಂಧ, ಸಣ್ಣ ಕತೆ, ಕಾದಂಬರಿ ಕ್ಷೇತ್ರಗಳಲ್ಲಿ ಹೆಸರು ಗಳಿಸಿದ್ದಾರೆ. ಸಾಹಿತ್ಯ ಸೇವೆಗೆ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದಾರೆ. 'ಎಲ್ಲಮ್ಮ ಮತ್ತು ದೇವದಾಸಿ ಸಂಪ್ರದಾಯ' ಕುರಿತ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಡಾಕ್ಟರೇಟ್ ಪಡೆದಿದ್ದಾರೆ. ಹತ್ತಾರು ಜಾನಪದ ಸಂಕಲನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ತನ್ನ ತಾಯಿ ಶಾರದಾ ಹೆಮ್ಮಿಗೆಯವರ ಸುಪ್ತ ಸಾಹಿತ್ಯ ಶಕ್ತಿಯನ್ನು ಗುರುತಿಸಿ, ಅವರಿಂದ ೮ ಪುಸ್ತಕಗಳನ್ನು ಬರೆಸಿಸಿದ್ದೇ ಅಲ್ಲದೆ ಸಂಸ್ಮರಣ ಸಂಪುಟವನ್ನು ಹೊರತಂದಿದ್ದಾರೆ. ಅಂಕಣಕಾರ್ತಿಯಾಗಿಯೂ ಪರಿಚಿತರು.

ವಿಳಾಸ : ೫೦, ಆಶೀರ್ವಾದ
ಶಿವಗಿರಿ, ಧಾರವಾಡ-೫೮೦ ೦೦೭.

**ಮಲ್ಲಿಕಾರ್ಜುನ ಡಿ.ಜಿ. :-** (೧೯೭೫) ಬಿ.ಈ. (ಮೆಕ್ಯಾನಿಕಲ್). ರೇಷ್ಮೆ ನೂಲು ಬಿಚ್ಚಾಣಿಕಾ ಗೃಹ ಕೈಗಾರಿಕೆಯನ್ನು ನಡೆಸುತ್ತಿದ್ದಾರೆ. ಛಾಯಾಗ್ರಹಣ, ಓದು, ಪತ್ರ-ಲೇಖನ, ಚಾರಣ, ಅಂಚೆ ಚೀಟಿ ಸಂಗ್ರಹಣೆಯಲ್ಲಿ ಆಸಕ್ತಿ. ಓರಿಸ್ಸ ರಾಜ್ಯದ ಚಿಲ್ಕಾ ಸರೋವರದ ವಲಸೆ ಹಕ್ಕಿಗಳಿಗೆ ಉಂಗುರ ತೊಡಿಸುವದರಿಂದ ಹಿಡಿದು, ಮನೆಯಂಗಳದ ಟುವ್ವಿ ಹಕ್ಕಿಯ ಸಂಸಾರವನ್ನು ಕ್ಲಿಕ್ಕಿಸುವದರಲ್ಲಿ ಆಸ್ತಕರು. ಸಾಹಿತ್ಯದಲ್ಲಿ ವಿಶೇಷ ಮಮತೆ. ಕನ್ನಡ ಪತ್ರಿಕೆಗಳಲ್ಲಿ ಇವರ ಚಿತ್ರ - ಲೇಖನಗಳು ಆಗಾಗ ಪ್ರಕಟವಾಗುತ್ತಿರುತ್ತವೆ.

ವಿಳಾಸ : ಉಲ್ಲೂರು ಪೇಟೆ
ಶಿಡ್ಲಘಟ್ಟ-೫೬೨ ೧೦೫
ಕೋಲಾರ ಜಿಲ್ಲೆ

**ಎಂ.ಎಸ್.ಕೆ. ಪ್ರಭು :-** (೧೯೩೮-೨೦೦೦) ಚಿಂತನಶೀಲ ಹಾಗೂ ಪ್ರಯೋಗಾತ್ಮಕ ಬರವಣಿಗೆ ಕೈಕೊಂಡವರು. ಹಲವು ನಾಟಕಗಳ ಕರ್ತೃ, 'ಬಕ' ನಾಟಕಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಗುಲಾಮನ ಸ್ವಾತಂತ್ರ್ಯ ಯಾತ್ರೆ ಹಲವಾರು ಪ್ರಯೋಗಗಳನ್ನು ಕಂಡಿದೆ. ಕಥೆ - ವಿಮರ್ಶೆಗಳನ್ನೂ ಬರೆದಿದ್ದಾರೆ. ಆಕಾಶವಾಣಿಯಲ್ಲಿ ಸಹಾಯಕ ನಿರ್ದೇಶಕರಾಗಿ ನಿವೃತ್ತರಾದವರು.

**ಪ್ರೊ. ಶ್ರೀಮತಿ ಎಚ್.ವಿ. ಸಾವಿತ್ರಮ್ಮ :-** (೧೯೧೭) ಎಮ್.ಎ. ಕನ್ನಡ- ಸಂಸ್ಕೃತಗಳಲ್ಲಿ ಪಂಡಿತರು. ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು ಆಗಿದ್ದ ದಿ. ಬಿ. ರಾಮಸ್ವಾಮಿ ಅವರ ಪತ್ನಿ. ಹಳಗನ್ನಡ, ತೆಲುಗು ಸಾಹಿತ್ಯಗಳಲ್ಲಿ ವಿದುಷಿ. ೧೨ನೇ ವಯಸ್ಸಿಗೇ ವಿವಾಹವಾಗಿ ಎಂಟು ಮಕ್ಕಳನ್ನು ಪಡೆದು, ಓದಿಸಿ ಅವರೊಂದಿಗೆ ತಾನೂ ಓದಿ, ಪರೀಕ್ಷೆ ಕಟ್ಟುತ್ತ, ಗೃಹಿಣಿಯ ನೊಗ ಭಾರವನ್ನು ಹೊತ್ತು ಉಪಾಧ್ಯಾಯಿನಿ, ಅಧ್ಯಾಪಕಿಯಾಗಿ ಯಶಸ್ವಿಯಾದ ಅಪರೂಪದ ಮಹಿಳೆ. ತನ್ನ ಪತಿಯ ಜೀವನ, ಸಾಧನೆಗಳನ್ನು ಪರಿಚಯಿಸುವ ೪೮೦ ಪುಟಗಳ 'ಮಧುರ ಸ್ಮೃತಿ' ಸಂಸ್ಮರಣ-ಸಂಪುಟವನ್ನು ಸಂಪಾದಿಸಿದ್ದಾರೆ. ವಾಗ್ಮಿ

ವಿಳಾಸ : 16-2-701/7
Anandnagar
Makakpet.
Hyderabad-560 036

**ಶಿ.ಹ. ನಾಯಕ :-** (೧೯೩೪) ಹೊನ್ನಾವರ ಸಮೀಪದ ಹೊಸಾಡದವರು, ಮುಂಬೈಯಲ್ಲಿ ಐದು ದಶಕಗಳಿಂದ ನೆಲೆಸಿದ್ದಾರೆ. ಮರಾಠಿ-ಕನ್ನಡಗಳಲ್ಲಿ ಕವಿತಾ ಸಂಕಲನಗಳನ್ನು ಹೊರತಂದಿದ್ದಾರೆ. ಕಾಮತರ ಶಾಲಾ ಸಹಪಾಠಿ. ನಲವತ್ತು ವರ್ಷಗಳ ಬಳಿಕ ಕಂಡ ಸ್ನೇಹಿತ, ಸಾಹಿತಿಯಾಗಿ ಬೆಳೆದು, ನಿಂತದ್ದು ಕಂಡು ವಿಸ್ಮಯಪಟ್ಟವರು.

ವಿಳಾಸ : ಬಿ-೩೦೩, ಮಂಜುನಾಥ ಅಪಾರ್ಟ್‌ಮೆಂಟ್,
ಸಂತ ನಾಮದೇವ್ ಪಥ, ಡೊಂಬಿವಲಿ (ಪೂರ್ವ)
Thane - 421 201

**ಡಾ. ಎಸ್.ಎಲ್. ಭೈರಪ್ಪ** : (೧೯೩೪) ಸುಪ್ರಸಿದ್ಧ ಕಾದಂಬರಿಕಾರರು. ಭಾರತೀಯ ಬಹು ಭಾಷೆಗಳಿಗೆ ಅನುವಾದಿವಾದ ಕೃತಿಗಳ ಜನಪ್ರಿಯ ಲೇಖಕರೆಂಬ ಹೆಗ್ಗಳಿಕೆಗೆ ಪಾತ್ರರು.

ವಿಳಾಸ : ೧೦೦೭,
ತೊಣಚಿಕೊಪ್ಪಲು ಬಡಾವಣೆ
ಮೈಸೂರು-೫೭೦ ೦೦೯.

**ನಿರಂಜನ :** (೧೯೨೪-೧೯೯೪) ಕುಳಕುಂದ ಶಿವರಾಯರ ಕಾವ್ಯನಾಮ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಹೆಸರು. ಕಾದಂಬರಿ, ಕಥಾಸಂಕಲನ, ಜೀವನ ಚರಿತ್ರೆ, ಸಂಕಲನ, ಭಾಷಾಂತರ ನಾಟಕ ಇತ್ಯಾದಿ ೧೬೦ ಕೃತಿಗಳು. ಕಿರಿಯರ ವಿಶ್ವಕೋಶ ರಚನೆ. ಕಾಮತರು ಅವರ ಮನೆಗೆ ಹೋಗಿ ನಿರಂಜನ-ಅನುಪಮಾ ದಂಪತಿಗಳನ್ನು ಭೇಟಿ ಮಾಡಿದ್ದು, ಕ್ಲಿಕ್ಕಿಸಿದ್ದು ಒಂದೇ ಬಾರಿ. ೧೯೮೧ರಲ್ಲಿ.

ವಿಳಾಸ : ಕಥೆ ೫೧೫, ೭ನೆಯ ಮೇನ್,
೫ನೇ ಬ್ಲಾಕ್ ಜಯನಗರ (ದಕ್ಷಿಣ)
ಬೆಂಗಳೂರು-೫೬೦೦೫೧.

# ಕೃಷ್ಣಾನಂದ ಕಾಮತರ ಸ್ವ-ವಿವರ
## (೧೯೩೪-೨೦೦೨)

**ಜೀವನ :** ಡಾ. ಕೃಷ್ಣಾನಂದರು, ಲಕ್ಷ್ಮಣ ವಾಸುದೇವ ಕಾಮತ ಹಾಗೂ ಶ್ರೀಮತಿ ರಮಾಬಾಯಿ ಅವರ ಮೂರನೆಯ ಸಂತಾನ. ಜವಳಿ ವ್ಯಾಪಾರಿಗಳ ಕುಟುಂಬದಲ್ಲಿ ಇಬ್ಬರು ಹೆಣ್ಣು ಮಕ್ಕಳ ತರುವಾಯ ೨೯-೯-೧೯೩೪ರಲ್ಲಿ ಜನಿಸಿದರು. ಹೊನ್ನಾವರದಲ್ಲೇ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಿಕ್ಷಣ ಮುಗಿಸಿ ಕೃಷ್ಣಾನಂದರು ಕುಮಟಾದ ಕೆನರಾ ಕಾಲೇಜು ಸೇರಿಕೊಂಡರು. ಆಗ ಪ್ರಾರಂಭವಾಗಿದ್ದ ಎನ್.ಸಿ.ಸಿ.ಗೆ ಸೇರಿಕೊಂಡರು. ಆ ದಿನಗಳ ತರಬೇತಿ ಬಲು ಕಠಿಣವಾಗಿತ್ತು. ಹಳೇ ಸೈನಿಕರ ಭಾರವಾದ ಯೂನೀಫಾರ್ಮು, ಬೂಟುಗಳ ಧಾರಣೆ, ಓಡಾಟ, ಶ್ರಮದಾನಗಳೇ ಹಣ್ಣು ಮಾಡಿಬಿಡುತ್ತಿದ್ದವು. ನಾಲ್ಕು ವರ್ಷಗಳ ತರಬೇತಿ ಅವರ ದೇಹದಾರ್ಢ್ಯ ಬೆಳೆಸಿದ್ದರ ಜೊತೆಗೆ ಎಂಥ ಆಹಾರ, ನೀರುಗಳನ್ನು ಸೇವಿಸಿ ಅರಗಿಸಬಲ್ಲ ಬಲ ನೀಡಿರಬೇಕು! ನಂತರ ಧಾರವಾಡ ಕರ್ನಾಟಕ ಕಾಲೇಜಿಗೆ ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರಗಳ ಪದವಿ ತರಗತಿ ಸೇರಿಕೊಂಡರು; ಅಂದಿನ ಮುಂಬಯಿ ಪ್ರಾಂತ್ಯದ ಈ ಪ್ರತಿಷ್ಠಿತ ಕಾಲೇಜಿಗೆ ವರ್ಗವಾಗಿ ಬರುತ್ತಿದ್ದ ಉತ್ತಮ ಶಿಕ್ಷಕ ವೃಂದದ ಮಾರ್ಗದರ್ಶನ ಅವರಿಗೆ ಲಭಿಸಿತು.

ಬಳಿಕ ಕೀಟಶಾಸ್ತ್ರದಲ್ಲಿ ಅದೇ ವರ್ಷ ಪ್ರಾರಂಭವಾಗಲಿದ್ದ ಸ್ನಾತಕೋತ್ತರ ಪದವಿಗೆ ಸೇರಿಕೊಂಡರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಆ ಪ್ರಾರಂಭದ ವರ್ಷಗಳಲ್ಲಿ ಅವರಿಗೆ ವಸತಿ ಸೌಕರ್ಯ ಇರಲಿಲ್ಲ. ಕಾಮತರು ಆ ಸೌಕರ್ಯ ಇದ್ದ ಪದವೀಧರರ ಜೀವನ ಶಿಕ್ಷಣ ಕೇಂದ್ರದ ವಿದ್ಯಾರ್ಥಿಯಾಗಿ ಆ ತೊಂದರೆ ನಿವಾರಿಸಿಕೊಂಡರು! ಒಂದು ವರ್ಷದ ಬಿ.ಎಡ್. ಹಾಗೂ ಜೀವನ ಶಿಕ್ಷಣ (**Basic Education**) (ಬೇಸಿಕ್ ಎಜುಕೇಶನ್) ಗಳ ಈ ಸಮ್ಮಿಶ್ರ ತರಬೇತಿ, ಕಲಾಜೀವಿ ಆಗಿದ್ದ ಅವರಿಗೆ ವಿಶೇಷ ಆಕರ್ಷಣೆಯಾಗಿತ್ತು. ೧೯೫೮ನೇ ವರ್ಷದ ಬ್ಯಾಚಿಗೇ ಅವರು ಪ್ರಥಮರಾಗಿ ಉತ್ತೀರ್ಣರಾದರು. ಜೊತೆಗೆ ಎಮ್.ಎಸ್ಸಿ. ಯ ಮೊದಲ ವರ್ಷದ ಓದನ್ನೂ ಕೈಕೊಂಡರು.

೧೯೫೫ರಲ್ಲಿ ಎಂ.ಎಸ್ಸಿ. ಯಲ್ಲಿ ಉತ್ತಮ ವರ್ಗದಲ್ಲಿ ತೇರ್ಗಡೆ ಹೊಂದಿ ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಕರಾದರು; ಜೊತೆಗೆ ಪಿ.ಹೆಚ್.ಡಿ. ಗೆ ನೋಂದಾಯಿಸಿದರು. ಎರಡು ವರ್ಷಗಳಲ್ಲಿ ಅಮೇರಿಕೆಯ ನ್ಯೂಯಾರ್ಕ್ ವಿಶ್ವವಿದ್ಯಾಲಯಕ್ಕೆ ಸೇರಿದ್ದ ಪ್ರಸಿದ್ಧ ಪರಿಸರ ವಿಜ್ಞಾನ ಹಾಗೂ ಅರಣ್ಯ ಶಾಸ್ತ್ರದ ಕಾಲೇಜು ಎಂದು ಹೆಸರು ಪಡೆದ ಸ್ಯಾರೆಕ್ಯೂಸ್ ವಿಶ್ವವಿದ್ಯಾಲಯದ ರಾಕ್‌ಫೆಲರ್ ವಿದ್ಯಾರ್ಥಿವೇತನ ಅವರಿಗೆ ಲಭಿಸಿತು.

೧೯೬೧ರಲ್ಲಿ ಯೂರೋಪ್ ಮಾರ್ಗವಾಗಿ ಹಡಗಿನಲ್ಲಿ ಅಮೇರಿಕೆಗೆ ಪ್ರಯಾಣ. ಸಸ್ಯದ ಕೀಟಾಣು ಬೆಳವಣಿಗೆ ಕುರಿತು ಅಧ್ಯಯನ ಹಾಗೂ ಡಾಕ್ಟರೇಟು ಪ್ರಾಪ್ತಿ. ಆ ಅವಧಿಯಲ್ಲೇ ಅಮೇರಿಕೆಯ ಅರಣ್ಯ ಖಾತೆಯ ಪ್ರಾಜೆಕ್ಟ್ ಅಡಿ ಅಲ್ಲಿಯ ೨೨ ರಾಜ್ಯಗಳ ಅರಣ್ಯ ರಕ್ಷಣೆಯ ವೀಕ್ಷಣೆ ಹಾಗೂ ಅಧ್ಯಯನ. ಅಮೇರಿಕೆಯ ೩೫ ರಾಜ್ಯಗಳಲ್ಲಿ ಬಸ್ ಪ್ರಯಾಣದಲ್ಲಿ ಸುತ್ತಾಟ.

೧೯೬೫ರಲ್ಲಿ ಭಾರತಕ್ಕೆ ಮರಳಿದರು. 'Scientists Pool' (ಸೈಂಟಿಸ್ಟ್ ಪೂಲ್) ಮೂಲಕ ಉದಯಪುರ ವಿಶ್ವವಿದ್ಯಾಲಯದ ಜೋಬನೇರ ಕೃಷಿ ಕಾಲೇಜಿನಲ್ಲಿ ಕೀಟಶಾಸ್ತ್ರದ ಸಂಶೋಧನಾ ಅಧಿಕಾರಿಯಾಗಿ, ಶಿಕ್ಷಕರಾಗಿ ಕಾರ್ಯನಿರ್ವಹಣೆ (೧೯೬೫ ಅಕ್ಟೋಬರ್‌ನಿಂದ ೧೯೬೮ ಅಕ್ಟೋಬರ್ ತನಕ.)

೧೯೬೬ರಲ್ಲಿ ವಿವಾಹ.

೧೯೬೭ರಲ್ಲಿ ಮಗ ವಿಕಾಸನ ಜನನ. ಈ ಅವಧಿಯಲ್ಲಿ 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕ ಬರೆದರು. ಅದು ಆ ಕೂಡಲೇ ಸ್ವೀಕೃತವಾದರೂ ಪ್ರಕಟಗೊಂಡದ್ದು ೧೯೬೯ರಲ್ಲಿ! ಅವರ ಮೊದಲ ಕೃತಿಯೇ ಅತ್ಯಂತ ಜನಪ್ರಿಯವಾಗಿ ಪ್ರಕಟವಾದ ವರ್ಷದೊಳಗೇ ಎಲ್ಲ ಪ್ರತಿಗಳು ಮಾರಾಟವಾದ ಕನ್ನಡದ ಪ್ರಥಮ ಪ್ರವಾಸ ಕಥನವೆಂದು ಹೆಗ್ಗಳಿಕೆಗೆ ಪಾತ್ರವಾಯಿತು.

೧೯೬೮-೧೯೭೦, ಪಶ್ಚಿಮ ಬಂಗಾಲದ ಪ್ಲಾಸಿಯಲ್ಲಿ 'ಕಾಮನ್ ವೆಲ್ತ್ ಇನ್‌ಸ್ಟಿಟ್ಯೂಟ್ ಆಫ್ ಬಯಲಾಜಿಕಲ್ ಕಂಟ್ರೋಲ್' ಸಂಸ್ಥೆಯ ಕೀಟ ಸಂಶೋಧನಾಕಾರಿಯಾಗಿ, ಅಲ್ಲಿಯ ಕೇಂದ್ರದ ಮುಖ್ಯಸ್ಥರಾಗಿ, ಕಾರ್ಯನಿರ್ವಹಣೆ. ೧೯೭೦ರಲ್ಲಿ ರಾಜೀನಾಮೆ.

೧೯೭೧ರಿಂದ ಬೆಂಗಳೂರಿನಲ್ಲಿ ಮಲ್ಲೇಶ್ವರದ ಸಂಪಿಗೆ ರಸ್ತೆಯಲ್ಲಿ ಸ್ವಂತದ ವೈಜ್ಞಾನಿಕ ಛಾಯಾಗ್ರಹಣದ ಲ್ಯಾಬೊರೇಟರಿ ಪ್ರಾರಂಭಿಸಿದರು. ಖಾಸಗಿಯಾಗಿ ಈ

ಕ್ಷೇತ್ರದಲ್ಲಿ ಸಾಹಸ ಮಾಡಿದ ಪ್ರಥಮರು. ೨೦೦೦ನೆಯ ವರ್ಷದವರೆಗೆ ನಡೆಸಿದರು. ಬೆಂಗಳೂರಿನ ಮತ್ತಿತರ ಸಮೀಪದ ವಿಜ್ಞಾನ ಸಂಸ್ಥೆಗಳು ಅವರ ವೈಜ್ಞಾನಿಕ ಛಾಯಾಗ್ರಾಹಣ ಪರಿಣತಿಯ ಲಾಭ ಪಡೆದವು.

೧೯೭೬-೧೯೭೭ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯು ಒಂದು ವರ್ಷದ ನೆರೆ-ರಾಜ್ಯದ ಸಾಹಿತ್ಯ, ಸಂಸ್ಕೃತಿಯ ಅಧ್ಯಯನಕ್ಕೆ ಶಿಷ್ಯವೇತನ ಘೋಷಿಸಿತ್ತು. ಆ ಯೋಜನೆಯಡಿ ಮಧ್ಯಪ್ರದೇಶದಲ್ಲಿ ವ್ಯಾಪಕವಾಗಿ ಸುತ್ತಾಡಿದ್ದೇ ಅಲ್ಲದೇ ಗಿರಿನಿವಾಸಿಗಳ, ಇತರ ಜನ ಜನಾಂಗಗಳ, ರೀತಿ ರಿವಾಜುಗಳನ್ನು ಅಭ್ಯಸಿಸಿದರು. ಮೂರು ಗ್ರಂಥಗಳನ್ನು ಹೊರತಂದರು. ಅಸಂಖ್ಯ ಚಿತ್ರಗಳನ್ನು ಕ್ಲಿಕ್ಕಿಸಿದರು. ವಿದೇಶ - ದೇಶವನ್ನು ಸಂಚರಿಸಿದರೂ ಸ್ವಂತದ ಊರು ತಾಯ್ನಾಡುಗಳನ್ನು ಕ್ಲಿಕ್ಕಿಸಿದ ನೆಮ್ಮದಿಯಿಲ್ಲವೆಂದು ಕರ್ನಾಟಕದ ಊರುಗಳಲ್ಲಿ ಸಂಚರಿಸಿದರು. ಗುಡಿ - ಗುಂಡಾರ - ನಿಷಿದಿ - ಬಸದಿಗಳನ್ನೆಲ್ಲ ಚಿತ್ರಗಳಲ್ಲಿ ಸೆರೆಯಿಟ್ಟರು. ವೈಜ್ಞಾನಿಕ ಛಾಯಾಗ್ರಾಹಣದಲ್ಲಿಯೂ ಹೆಚ್ಚಿನ ಪರಿಣತಿ ಸಾಧಿಸಿದ್ದರಿಂದ ಸಂಶೋಧನ ವಿದ್ಯಾರ್ಥಿಗಳು, ಪ್ರಾಧ್ಯಾಪಕರು ಹುಡುಕಿಕೊಂಡು ಬರುತ್ತಿದ್ದರು. ತನ್ನ ವಿದೇಶದ ಅಧ್ಯಯನ - ತರಬೇತಿಗಳ ಪ್ರಯೋಜನವನ್ನು ಈ ದೇಶ - ರಾಜ್ಯಗಳು ಪಡೆಯದಿದ್ದರೂ ಕೊರಗದೇ, “ವೈಜ್ಞಾನಿಕ ಸೇವೆ” ವಿಜ್ಞಾನಿ ಬಳಗಕ್ಕೆ ಮೀಸಲು!! ಎಂಬ ಅಭಿಮಾನದಿಂದ ಅತ್ಯಲ್ಪ ಶುಲ್ಕವನ್ನು ಪಡೆದೋ ಪಡೆಯದೆಯೋ ಸೇವೆಯನ್ನು ನೀಡುತ್ತಿದ್ದರು.

ಈ ಅವಧಿಯಲ್ಲಿ ಇನ್ನೂ ೨೦ ಪುಸ್ತಕಗಳನ್ನೂ ನೂರಾರು ಲೇಖನಗಳನ್ನೂ ಬರೆದರು. ಮುಖ್ಯವಾಗಿ ಕಣ್ಮರೆಯಾದ ಕಾವಿಕಲೆಯ ಕುರಿತು ಕನ್ನಡದಲ್ಲಿ ಒಂದು, ಕೊಂಕಣಿಯಲ್ಲಿ ಒಂದು ಗ್ರಂಥ ರಚಿಸಿ ಕಾವಿಕಲೆಯ ನೆನಪನ್ನು ಕಾಯಂ ಕಾದಿರಿಸಿದರು.

೧೯೯೭ನೇ ವರ್ಷ, ಭಾರತ ಸ್ವಾತಂತ್ರ್ಯ ಪ್ರಾಪ್ತಿಯ ೫೦ನೆಯ ವರ್ಷ, ಕಾಮತರ ಲೇಖನಿ ಕ್ಯಾಮರಾಗಳಿಗೆ ಹೊಸ ಆಯಾಮವನ್ನು ಒದಗಿಸಿತು. ಸಾಫ್ಟ್ ವೇರ್ ಇಂಜಿನಿಯರ್‌ನಾದ ಮಗ ವಿಕಾಸನು, ಇದೇ ಸಂದರ್ಭದಲ್ಲಿ **www.kamat.com** ಎಂಬ ವೆಬ್‌ಸ್ಯಾಟ್ ಪ್ರಾರಂಭಿಸಿದ. ಕಾಮತರು ಐವತ್ತು ವರ್ಷಗಳಲ್ಲಿ ಕಾದಿರಿಸಿದ ಸಹಸ್ರಾರು ನೆಗೆಟಿವ್ ಹಾಗೂ ಟಿಪ್ಪಣಿಗಳು ರೂಪ ತಾಳಿ ಪ್ರಪಂಚದ ಆಸಕ್ತರಿಗೆಲ್ಲ ಎಟುಕುವಂತಾದವು. ಪತ್ನಿ, ಮಗ, ಸೊಸೆಯರ ಸಹಕಾರದಿಂದ ಮುಂದುವರಿದ ವೆಬ್‌ಸ್ಯಾಟ್ ಸದ್ಯಕ್ಕೆ ೩೦ ಲಕ್ಷ ವೀಕ್ಷಕರನ್ನು ಪ್ರತಿ ತಿಂಗಳು ಆಕರ್ಷಿಸುತ್ತದೆ.

೨೦-೦೨-೨೦೦೨ ರಂದು ಹೃದಯಸ್ತಂಭನದಿಂದ ಆಕಸ್ಮಿಕ ನಿಧನ :

ಕೊನೆಗಳಿಗೆಯವರೆಗೂ ಕಾರ್ಯೋನ್ಮುಖರಾಗಿದ್ದರು.

**ಸಂದ ಗೌರವ ಹಾಗೂ ಬಹುಮಾನಗಳು :** ಕೆಳಗಿನ ಪುಸ್ತಕಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಆಯಾ ಸಾಹಿತ್ಯ ಪ್ರಕಾರದಲ್ಲಿ ಉತ್ತಮ ಕೃತಿಯೆಂದು ಪ್ರಶಸ್ತಿ ಪ್ರಾಪ್ತವಾಗಿದೆ. **೧. ನಾನೂ ಅಮೇರಿಕೆಗೆ ಹೋಗಿದ್ದೆ,** ಪ್ರವಾಸ ಸಾಹಿತ್ಯ ೧೯೬೯, **೨. ಪ್ರಾಣಿ ಪರಿಸರ,** ಜನಪ್ರಿಯ ವಿಜ್ಞಾನ ೧೯೭೫, **೩. ಬಸ್ತರ ಪ್ರವಾಸ,** ಪ್ರವಾಸ ಕಥನ ೧೯೯೧

**ಪಠ್ಯ :** ಬೆಂಗಳೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು "ನಾನೂ ಅಮೇರಿಕೆಗೆ ಹೋಗಿದ್ದೆ" ಮತ್ತು "ಪ್ರಾಣಿ ಪರಿಸರ" ಗಳನ್ನು ಮೊದಲ ವರ್ಷದ ಪದವಿ ತರಗತಿಗಳಿಗೆ ಪಠ್ಯಗಳಾಗಿ ಆಯ್ಕೆ ಮಾಡಿವೆ. ಮಹಾರಾಷ್ಟ್ರ ಬೋರ್ಡು ಎಸ್.ಎಸ್.ಎಲ್.ಸಿ.ಗೆ ಹಾಗೂ ಕರ್ನಾಟಕ ಸರಕಾರಿ ಟಿ.ಸಿ.ಎಚ್. ಪರೀಕ್ಷೆಗೆ ಬೇರೆ, ಬೇರೆ ಪ್ರಬಂಧಗಳನ್ನು ಆಯ್ಕೆ ಮಾಡಿವೆ. (೧೯೭೨-೨೦೦೦) 'ಕರಿಹಲಗೆ ಯೋಜನೆ' ಯ ಅಡಿಯಲ್ಲಿ ಕರ್ನಾಟಕ ಸರಕಾರ ಪ್ರಾಣಿ ಪರಿಸರದ ೧೦,೦೦೦ ಪ್ರತಿಗಳನ್ನು ಮುದ್ರಿಸಿತು. ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಅದೇ ಪುಸ್ತಕ, ಸಾಮಾನ್ಯರಿಗೆ ಎಟುಕುವಂತೆ ನೋಡಿಕೊಂಡಿತು.

**ಗೌರವ, ಪ್ರಶಸ್ತಿಗಳು :** ೧. ಶ್ರೀ ಗೌರೀಶ ಕಾಯಕಿಣಿ ಪ್ರತಿಷ್ಠಾನ (ಕುಮಟಾ)ವು ವಿಜ್ಞಾನ, ಪ್ರವಾಸ ಸಾಹಿತ್ಯಗಳಲ್ಲಿ ಅನುಪಮ ಸೇವೆ ಗುರುತಿಸಿ ನೀಡಿದ ಪ್ರಶಸ್ತಿ - ೧೯೯೫.

೨. ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ೧೯೭೭ರಲ್ಲಿ ಅವಿರೋಧ ಆಯ್ಕೆ.

೩. ಶಿಕಾಗೋ ನಗರದಲ್ಲಿ ೨೦೦೦ನೇ ವರ್ಷದಲ್ಲಿ ನಡೆದ ಸಹಸ್ರಮಾನದ ಕೊಂಕಣಿ ಸಮ್ಮೇಳನದಲ್ಲಿ ಕೊಂಕಣಿ ಸಾಹಿತ್ಯ-ಕಲೆಗಳಿಗೆ ವೆಬ್‌ಸ್ಯಾಟ್ ನೀಡಿದ ಸೇವೆಗೆ ವಿಶೇಷ ಪ್ರಶಸ್ತಿ.

೪. ಕೊಂಕಣಿ ಭಾಷೆಯಲ್ಲಿ ಕಾವಿಕಲೆ ಪುಸ್ತಕಕ್ಕೆ ಮಣಿಪಾಲದ ಟಿ.ಎಂ.ಎ. ಪೈ ಅಧಿಷ್ಠಾನವು ನೀಡಿದ ವಿಶೇಷ ಬಹುಮಾನ (೨೦೦೩)

## ಪ್ರಕಟಿತ ಪುಸ್ತಕಗಳು

| ಕ್ರಮ ಸಂಖ್ಯೆ | ಶೀರ್ಷಿಕೆ | ಪ್ರಕಾರ | ಪ್ರಕಾಶಕರು | ವರ್ಷ |
|---|---|---|---|---|
| ೧. | ನಾನೂ ಅಮೇರಿಕೆಗೆ ಹೋಗಿದ್ದೆ | ಪ್ರವಾಸಕಥನ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೬೯ |
| ೨. | ಭಗ್ನಸ್ವಪ್ನ | ಕಾದಂಬರಿ | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೧ |
| ೩. | ವಂಗದರ್ಶನ | ಪ್ರವಾಸಾನುಭವ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೭೨ |
| ೪. | ನಾ ರಾಜಸ್ಥಾನದಲ್ಲಿ | ಪ್ರದೇಶ ಪರಿಚಯ | ಅಕ್ಷರ ಪ್ರಕಾಶನ, ಸಾಗರ | ೧೯೭೪ |
| ೫. | ಪ್ರಾಣಿ ಪರಿಸರ | ಪರಿಸರ ಚಿತ್ರಣ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೭೫ |
| ೬. | ಕಾಲರಂಗ | ಪ್ರವಾಸ ಕಥನ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೮೨ |
| ೭. | ಪ್ರೇಯಸಿಗೆ ಪತ್ರಗಳು | ಪತ್ರಗಳು | ಮನೋಹರ ಗ್ರಂಥಮಾಲೆ, ಧಾರವಾಡ | ೧೯೯೦ |
| ೮. | ಪಶು - ಪಕ್ಷಿ ಪ್ರಪಂಚ | ಪ್ರಾಣಿ ವಿಜ್ಞಾನ | ಪುಸ್ತಕಾಲಯ, ಬೆಂಗಳೂರು | ೧೯೯೦ |
| ೯. | ಬಸ್ತರ ಪ್ರವಾಸ | ಗಿರಿಜನರ ಪರಿಚಯ | ಪುಸ್ತಕಾಲಯ, ಬೆಂಗಳೂರು | ೧೯೯೧ |
| ೧೦. | ಕೀಟ ಜಗತ್ತು | ಕೀಟ ವಿಜ್ಞಾನ | ಸಮರ್ಥ ಪ್ರಕಾಶನ, ಬೆಂಗಳೂರು | ೧೯೯೨ |
| ೧೧. | ಸಸ್ಯ ಪ್ರಪಂಚ | ಸಸ್ಯ ಲೋಕ | ಪುಸ್ತಕಾಲಯ, ಬೆಂಗಳೂರು | ೧೯೯೨ |
| ೧೨. | ಮಧ್ಯ ಪ್ರದೇಶದ ಮಡಿಲಲ್ಲಿ | ಪ್ರವಾಸ ಕಥನ | ಪುಸ್ತಕಾಲಯ, ಬೆಂಗಳೂರು | ೧೯೯೩ |
| ೧೪. | ಸಸ್ಯ ಪರಿಸರ | ಸಸ್ಯ ಲೋಕದ ಕೊಡುಗೆ | ಪುಸ್ತಕಾಲಯ, ಬೆಂಗಳೂರು | ೧೯೯೪ |

| | | | | |
|---|---|---|---|---|
| ೧೫. | ಅಕ್ಷತ | ಜನಾಂಗೀಯ ಅಧ್ಯಯನ | ನವಕರ್ನಾಟಕ, ಬೆಂಗಳೂರು | ೧೯೯೯ |
| ೧೬. | ಇರುವೆಯ ಇರವು | ಕೀಟ ವಿಸ್ಮಯ | ಪ್ರಿಸಂ ಬುಕ್ ಹೌಸ್, ಬೆಂಗಳೂರು | ೧೯೯೯ |
| ೧೭. | ಕಾಗೆಯ ಕಾಯಕ | ಕಾಕಲೋಕ ಪರಿಚಯ | ಪ್ರಿಸಂ ಬುಕ್ ಹೌಸ್, ಬೆಂಗಳೂರು | ೨೦೦೦ |
| ೧೮. | ಕೊಂಕಣ್ಯಾಲಿ ಕಾವಿಕಲಾ (ಕೊಂಕಣಿ ಭಾಷೆ) | ಕಲೆ | ರಾಜ್ಯ ಕೊಂಕಣಿ ಸಾಹಿತ್ಯ ಆಕಾಡೆಮಿ, ಮಂಗಳೂರು | ೨೦೦೦ |
| ೧೯. | ಪ್ರವಾಸಿಯ ಪ್ರಬಂಧಗಳು | ಪ್ರವಾಸಾನುಭವ | ಶ್ರೀ ವಾರಿ ಪ್ರಕಾಶನ, ಬೆಂಗಳೂರು | ೨೦೦೦ |
| ೨೦. | ಮರುಪಯಣ | ಪರಿಸರ ದುರಂತ | ಮನೋಹರ ಗ್ರಂಥಮಾಲೆ, ಧಾರವಾಡ | ೨೦೦೧ |
| ೨೧. | ಸರ್ಪ ಸಂಕುಲ | ಉರಗವರ್ಗ ಪರಿಚಯ | ಪ್ರಿಸಂ ಬುಕ್ ಹೌಸ್, ಬೆಂಗಳೂರು | ೨೦೦೨ |
| ೨೨. | ಪತ್ರಪರಾಚಿ | (ಮಗ ವಿಕಾಸನಿಗೆ ಬರೆದ ಆಯ್ದ ಪತ್ರಗಳು) | ಮನೋಹರ ಗ್ರಂಥಮಾಲೆ, ಧಾರವಾಡ | ೨೦೦೪ |
| ೨೩. | ಕಮ್ಮಟಿಗ | (ಕಾಮತರ ಜೀವನ - ಸಾಧನೆಗಳನ್ನು ಪರಿಚಯಿಸುವ ಸಂಸ್ಮರಣ ಸಂಪುಟ) | ಕೃಷ್ಣಾನಂದ ಕಾಮತ ಪ್ರತಿಷ್ಠಾನ, ಹೊನ್ನಾವರ | ೨೦೦೪ |

**_Timeless Theatre_ ಎಂಬ ಸೀಡಿಯು ಕಾಮತರ ೧೧೦೦ ಚಿತ್ರಗಳೊಂದಿಗೆ ಅವರ ಪ್ರವಾಸಾನುಭವಗಳನ್ನು ಪರಿಚಯಿಸುತ್ತದೆ.**

# ಪಶು-ಪಕ್ಷಿಗಳಲ್ಲಿ ಪರಿಸರ ಪ್ರಜ್ಞೆ

## ಕೃಷ್ಣಾನಂದ ಕಾಮತ್

**ಕೃಷ್ಣಾನಂದ ಕಾಮತರ ಪರಿಸರ ಪ್ರೇಮದ ಮಾದರಿಯೊಂದನ್ನು ಇಲ್ಲಿ ಕೊಟ್ಟಿದೆ. ಪ್ರಾಣಿ ಜಗತ್ತಿನ ಮೀರಿದ ಬುದ್ಧಿಶಾಲಿಯೆಂದು ಗುರುತಿಸಲ್ಪಡುವ ಮಾನವನ ಸ್ವಾರ್ಥ, ಕ್ರೌರ್ಯಗಳ ಜೊತೆಗೆ ಸಹಜೀವಿಗಳಿಗಿದ್ದ ಪರಿಸರದ ಅರಿವೂ ಅವನಿಗಿಲ್ಲವೆಂಬ ಅಂಶವನ್ನು ಎತ್ತಿ ತೋರಿಸಿದ್ದಾರೆ. ಜನಸಂಖ್ಯೆ ಮಿತಿಮೀರಿ ಬರಲಿರುವ ಘೋರ ವಿನಾಶದ ಎಚ್ಚರಿಕೆಯೂ ಇಲ್ಲಿದೆ. ಬೆಂಗಳೂರಿನ ಅಭಿನವ ಸಂಸ್ಥೆಯು ೯೮ರಲ್ಲಿ ಪ್ರಕಟಿಸಿದ 'ಕದಳೀವನ ಕರ್ಪೂರ' ಸಂಕಲನದಿಂದ ಇದನ್ನು ಆಯ್ದುಕೊಳ್ಳಲಾಗಿದೆ.**

ಲೇಸರ್, ಕಂಪ್ಯೂಟರ್, ಸೆಟೆಲ್ಲ್ಯಾಟ್ ಬಾಹ್ಯಾಕಾಶ ಉಡ್ಡಾಣಗಳೆಲ್ಲ ಎಂಥ ಅದ್ಭುತ ಆಧುನಿಕ ಮಾನವ ಸಾಧನೆಗಳೆಂದು ಅಭಿಮಾನಪಡುತ್ತಿರುವ ಮರುಕ್ಷಣದಲ್ಲಿಯೇ ಇದೇ ಅಪೂರ್ವ ಸಂಶೋಧಕನು ಮಿತಿಮೀರಿದ ಸುರಾಪಾನ, ಮೋಜಿಗಾಗಿಯೇ ಮಾದಕ ದ್ರವ್ಯಗಳ ಸೇವನೆ, ಹೆಚ್ಚುತ್ತಿರುವ ಕಾಮುಕ ವಿಕೃತಿಗಳು, ಹರಡುತ್ತಿರುವ ಏಡ್ಸ್ ಪಿಡುಗು, ಕಿಕ್ಕಿರಿದು ತುಂಬುತ್ತಿರುವ ಜನಜಂಗುಳಿ, ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರಗಳ ಮೂಲಕ ಸರ್ವನಾಶದ ಹಾದಿಯನ್ನು ತುಳಿಯುತ್ತಿರುವುದು ದುರಂತವೇ ಸರಿ. ಈ ಭೂಮಂಡಲದಲ್ಲಿ ಅತೃಪ್ತಜೀವಿಯೆಂದರೆ ಮಾನವನೊಬ್ಬನೇ ಏನೋ! ಮಾನವನ ಎಲ್ಲ ಸಮಸ್ಯೆಗಳೂ ಇಡೀ ವಿಶ್ವವನ್ನು ತನ್ನ ಪೀಳಿಗೆಗಳಿಂದಲೇ ತುಂಬಿಸುವ ಅತಿಯಾಸೆಯ ಹಂಬಲದಿಂದ ಉತ್ಪನ್ನವಾದವುಗಳು. ಕಾಲುಗಳನ್ನು ನಡಿಸಿ ದಣಿಸಿ ದೇಹಕ್ಕೆ ಆರೋಗ್ಯ ತಂದುಕೊಳ್ಳುವ ಬದಲಾಗಿ ವಾಹನಗಳಲ್ಲಿ ಓಡಾಡುವುದರಿಂದ, ಮೇರೆಯರಿಯದ ಲಾಭಕ್ಕಾಗಿ ಕಾರ್ಖಾನೆಗಳನ್ನು ಬೆಳೆಸಿರುವುದರಿಂದ, ಈ ವಾಹನ ಮತ್ತು ಕಾರ್ಖಾನೆಗಳಿಂದ ಏಕಪ್ರಕಾರವಾದ ವಿಷವಾಯು ಹೊರಹೊಮ್ಮುತ್ತ ಪರಿಸರವೆಲ್ಲ ಕಲುಷಿತವಾಗುತ್ತಿದೆ. ಇದರಿಂದಾಗಿ ಕ್ಷಯ, ಪ್ಲೂರಸಿ, ಕ್ಯಾನ್ಸರ್ ಮುಂತಾದ ರೋಗಗಳು ಹರಡುತ್ತಿವೆ. ಅತ್ಯಂತ ವಿಷಕಾರಿ ಕೀಟನಾಶಕ ರಾಸಾಯನಿಕಗಳನ್ನು ಎಗ್ಗಿಲ್ಲದೇ ಎಲ್ಲೆಡೆ

ಬಳಸಲಾಗುತ್ತಿದೆ. ಇಷ್ಟಾದರೂ ಮಾನವನಿಗೆ ಇನ್ನಷ್ಟು ಆರಾಮ - ವಿರಾಮದ ಹಂಬಲ ಹೋಗಿಲ್ಲ. ಈ ಭೂಮಿಯ ಮೇಲೆ ಬದುಕಿನ ಅಧಿಕಾರ ಕೇವಲ ಮಾನವನಿಗೇ ಸೀಮಿತವಾಗಿಲ್ಲ. ಅಸಂಖ್ಯ ಸಹಜೀವಿಗಳೂ ಬಾಳಿ ಬದುಕಲು ಬಾಧ್ಯಸ್ಥರು. ಅವೆಲ್ಲವೂ ತಮ್ಮ ಪರಿಸರದ ನಿಯಮಾವಳಿಗಳನ್ನು ಚಾಚೂತಪ್ಪದೇ ಪಾಲಿಸುತ್ತವೆ! ಎಂಬುದನ್ನು ಅರಿಯುವ ಪ್ರಯತ್ನವನ್ನೂ ಮಾಡಿದಲ್ಲಿ ಮನುಷ್ಯನೂ ಅರ್ಥಪೂರ್ಣ ಜೀವನ ನಡೆಸಲು ಸಾಧ್ಯವಾಗಬಹುದು.

ಶಕ್ತಿ ಸಾಮರ್ಥ್ಯಗಳೊಂದಿಗೆ ಬುದ್ಧಿಗೂ ಹೆಸರಾದ ಕಾಡಾನೆ, ಪ್ರಕೃತಿಯೊಂದಿಗೆ ಹಾಸುಹೊಕ್ಕಾಗಿ ಜೀವಿಸುತ್ತದೆ. ಕಾಡಿನಲ್ಲಿ ಹೇರಳವಾಗಿ ಲಭ್ಯವಿರುವ ಸೊಪ್ಪು, ಎಲೆ, ದಂಟುಗಳೇ ಅದರ ಮೃಷ್ಟಾನ್ನ. ಎಂದೂ ಮಾಂಸಾಹಾರಕ್ಕೆ ಎಳಸದ ಅದು ವರ್ಷದುದ್ದಕ್ಕೂ ಆಹಾರ ಒದಗುವಂತೆ ಮುನ್ನೆಚ್ಚರಿಕೆ ವಹಿಸುತ್ತದೆ. ಆನೆ ಒಂದೆಡೆ ಸ್ಥಾಯಿಯಾಗಿ ನೆಲೆಸಿ, ಅಲ್ಲಿಯ ಕಾಡನ್ನು ಮೆದ್ದು ಬರಿದೋ ಬರಿದು ಮಾಡುವ ಬದಲು, ನೂರಾರು ಕಿಲೋಮೀಟರ್ ದೂರದ ಕಾಡುಗಳಲ್ಲಿ ಸಂಚರಿಸುತ್ತ ಉದರ ನಿರ್ವಹಣೆ ಮಾಡುವ ಜಾಣ. ಇದರಿಂದ ಮೊದಲು, ಮೆದ್ದು ಬರಿದಾದ ವೃಕ್ಷಗಳೆಲ್ಲ ಪುನಃ ಚಿಗಿತು ಆಹಾರ ಒದಗಿಸುತ್ತವೆ. ಆನೆ ಮಿತಸಂತಾನಿ, ಇಷ್ಟಾದರೂ ಹುಟ್ಟಿದ ಅದರ ಮರಿಗಳೆಲ್ಲಾ ಬದುಕಿ ಇರುವಂತಾಗುತ್ತಿದ್ದರೆ, ಅವುಗಳ ಆಹಾರಪೂರೈಕೆಗೆ ಅಸ್ತಿತ್ವದಲ್ಲಿರುವ ಯಾವತ್ತೂ ಕಾಡೂ, ವಾಸಕ್ಕಾಗಿ ಇಡೀ ಭೂಮಂಡಲವೂ ಸಾಲುತ್ತಿರಲಿಲ್ಲ! ಆನೆಯ ಬಳಗ ಹುಟ್ಟು, ಸಾವುಗಳನ್ನು ಸಮತೋಲನ ದೃಷ್ಟಿಯಿಂದ ಸ್ವಾಗತಿಸುತ್ತದೆ. ಗಂಡು ಹೆಣ್ಣುಗಳಲ್ಲಿ ತಾರತಮ್ಯ ತೋರದೇ ಮರಿಗಳನ್ನು ಅತ್ಯಂತ ದಕ್ಷ ರೀತಿಯಿಂದ ಬೆಳೆಸುತ್ತದೆ. ಆದರೆ ಕೋರೆಗಳಿಗಾಗಿ ಕೈಗೊಳ್ಳುವ ಹತ್ಯಾಕಾಂಡದಿಂದಾಗಿ ಹೆಣ್ಣಾನೆಗಳಿಗೆ ಗಂಡಾನೆಗಳ ಸಹವಾಸ ಒದಗದೇ ಆನೆಗಳ ಸಮಾಜದಲ್ಲಿ ದಾರುಣ ಅಲ್ಲೋಲಕಲ್ಲೋಲವನ್ನುಂಟು ಮಾಡಿದ ಶ್ರೇಯಸ್ಸು ದಂತಚೋರ ಮಾನವನದ್ದು.

ಕ್ರೌರ್ಯಕ್ಕೆ ಹೆಸರಾದ ಹೆಬ್ಬುಲಿಯೂ ಮಾನವನೊಡನೆ ಹೋಲಿಸಿದರೆ ಸೌಮ್ಯಜೀವಿ. ಉದರನಿಮಿತ್ತ ಮಾತ್ರ ಇತರ ಜೀವಿಗಳನ್ನು ಬೇಟೆಯಾಡುವ ಅದು ತನ್ನ ಶಕ್ತಿ ಸಾಮರ್ಥ್ಯ ಪ್ರದರ್ಶನ ಅಥವಾ ಆಟಕ್ಕಾಗಿ ಎಂದೂ ಶಿಕಾರಿ ಮಾಡುವುದಿಲ್ಲ. ತನ್ನ ವಾಸಸ್ಥಳವನ್ನು ಚಿಗರೆಕೊಂಬು, ಕಾಡೆಮ್ಮೆಗಳ ಶಿರದಿಂದ ಅಲಂಕರಿಸಿ ಬೀಗುವುದಿಲ್ಲ. ಒಮ್ಮೆ ಮನಸ್ವೀ ಭೋಜನ ಮುಗಿಯಿತೆಂದರೆ ಎದುರಿಗೇ ಹುಲ್ಲೆ ಮೇಯುತ್ತಿದ್ದರೂ ಅದರ ಗೋಜಿಗೆ ಹೋಗದ ಅದು ತಾನಾಡಿದ ಬೇಟೆಯ ಮೇಲೆ ನರಿ, ನಾಯಿ, ತೋಳ, ಹದ್ದುಗಳು ಭೋಜನಕೂಟ ನಡೆಯಿಸುತ್ತಿದ್ದರೂ ಎಂದೂ ಆಕ್ಷೇಪ ಎತ್ತುವುದಿಲ್ಲ. ಮಾನವನಿಗೆ ಎಂದಾದರೂ ಇಂಥ ಹೃದಯವಂತಿಕೆ ಸಾಧ್ಯವೇ?

ತಿಮಿಂಗಿಲವು ಭಾರೀ ಭಾರದ ಜಲಜೀವಿಯಾಗಿದ್ದರೂ ನೀರಿನಲ್ಲಿ ತೇಲಿಬರುವ ಅತಿ ಸೂಕ್ಷ್ಮ ಸಸ್ಯ ಪ್ರಾಣಿಗಳನ್ನು ಬೇರ್ಪಡಿಸಿ, ಅವುಗಳನ್ನೇ ಆಹಾರವಾಗಿ ಬಳಸುತ್ತದೆ. ಇದರಿಂದಾಗಿ ತಿಮಿಂಗಿಲಗಳು ಹೊಟ್ಟೆಯ ವ್ಯವಸ್ಥೆ ಮಾಡಿಕೊಳ್ಳುವುದರ ಜೊತೆಗೇ ತಮ್ಮ ಪರಿಸರದ ನೈರ್ಮಲ್ಯವನ್ನು ಕಾಪಾಡುವುದಕ್ಕೆ ನೆರವಾಗುತ್ತವೆ. ಅಲ್ಲದೆ ಅವುಗಳ ಸಮಾಜದಲ್ಲಿ ಕಸದ ತೊಟ್ಟಿಗಳ ಅಥವಾ ಪೌರಕಾರ್ಮಿಕರ ಆವಶ್ಯಕತೆಯೇ ಇಲ್ಲ! ಅವು ತುಂಬ ಸಾಧುಪ್ರಾಣಿಗಳಾದ್ದರಿಂದ ವಿವಿಧ ವರ್ಗದ ಅಸಂಖ್ಯ ಮೀನುಗಳು ಅವುಗಳೊಂದಿಗೆ ತೇಲಾಡಿ ಸಹಭೋಜನ ನಡೆಸುತ್ತವೆ. ತನ್ನೊಂದಿಗೆ ಇತರ ಜಲಜೀವಿಗಳಿಗೂ ಜೀವಿಸುವ ಅನುಕೂಲತೆಗಳನ್ನು ಕಲ್ಪಿಸಿಕೊಡುವ ಉದಾರ ಜೀವಿ ಅದು.

ಕರ್ಣಕರ್ಕಶರೆಂದು ಖ್ಯಾತಿಪಡೆದ ಕಾಕರಾಜಸಮಾಜಕ್ಕೆ "ಪಂಚಾಯತ ರಾಜ್ಯ" ವನ್ನು ಮೊಟ್ಟಮೊದಲು ಆಚರಣೆಯಲ್ಲಿ ತಂದ ಶ್ರೇಯಸ್ಸು ಸಲ್ಲಬೇಕು. ಸ್ಥಳೀಯವಾಗಿ ಏನಾದರೂ ಅಕ್ರಮ, ಅತ್ಯಾಚಾರಗಳು ನಡೆದರೆ, ತಂಡದ ಮುಖ್ಯಸ್ಥನು ಕಹಳೆಯೂದಿ ಪಂಚರನ್ನು ಆಮಂತ್ರಿಸಿ, ಸಭೆಯನ್ನು ಸೇರಿಸಿಯೇ ಬಿಡುತ್ತಾನೆ. ಅತಿಕ್ರಮ ಮಾಡಿದವರು, ವಂಚನೆ, ಮೋಸ ಕೈಕೊಂಡವರು ತಮ್ಮ ತಪ್ಪನ್ನು ಒಪ್ಪಿಕೊಂಡಾಗ, ಅವುಗಳನ್ನು ಕುಕ್ಕಿ ಒಂದೆರಡು ಗರಿ ಕಿತ್ತು ಬರುವಂತಾದರೆ ಶಿಕ್ಷಿಸಿ ನ್ಯಾಯ ದೊರಕಿಸಿಕೊಂಡಂತೆ. ಅಪರಾಧಿಗಳ ಸುಳ್ಳನ್ನು ಸತ್ಯವೆಂದು ಸಾಧಿಸುವ ವಕೀಲರಿಲ್ಲದ, ಜೈಲು ಸೇರಬೇಕಾಗಿಲ್ಲದ ಮರಣದಂಡನೆ ಇಲ್ಲದ ಸಮಾಜ ಅದು. ಮಾನವನು ಇಷ್ಟಾದರೂ ಸತ್ಯವಂತನಾಗಿ ಬದುಕುವಂತಿದ್ದರೆ...!

ಮಂದಮತಿಯಾದ ಮಂಡೂಕರಾಯನಿಗೂ ಮಳೆಯ ನೀರಿನ ಮಡುವಿನಲ್ಲಿ ಎಷ್ಟು ಮರಿಗಳನ್ನು ಹಿತಮಿತವಾಗಿ ಬೆಳೆಸಬೇಕೆಂದು ಗೊತ್ತು. ಅತಿ ಸಂತಾನವಾದರೆ ತಮ್ಮ ವರ್ಗವೆಲ್ಲ ಹಸಿವಿನಿಂದ ಬಳಲಬೇಕಾಗುವುದೆಂದು ಸ್ವಸಂರಕ್ಷಣೆಗಾಗಿ ಮಿತಸಂತಾನದ ಸೂತ್ರವನ್ನು ಪಶುಪಕ್ಷಿಗಳೂ ತಪ್ಪದೇ ಪಾಲಿಸಿಕೊಂಡು ಬರುತ್ತವೆ. ಕಷ್ಟಪಟ್ಟು ಗಿಡ - ಗಂಟೆಗಳಲ್ಲಿ ಗೂಡುಕಟ್ಟಿ, ನಾಲ್ಕು ಮೊಟ್ಟೆಗಳನ್ನು ಇಡುವ ಪುಟ್ಟ ಸೂರಕ್ಕಿ ಕಾವು ಕೊಡುವಾಗ, ಮರಿ ಬೆಳೆಯುವಾಗ, ಬೀಸುಗಾಳಿಯಿಂದ, ಕಾಗೆ - ಹಾವುಗಳಂತಹ ವೈರಿಗಳಿಂದ ಒಂದೆರಡು ಮರಿಗಳು ಮೃತಪಟ್ಟರೂ, ಮತ್ತೆ ತಿರುಗಿ ಮರಿಮಾಡುವುದರತ್ತ ಮನಸ್ಸು ಹಾಕುವುದಿಲ್ಲ. ಸಂತಾನದ ಸರ್ವನಾಶವಾದಾಗ ಮಾತ್ರ ತಿರುಗಿ ಗೂಡು ಕಟ್ಟಿ ಮತ್ತೊಮ್ಮೆ ನಾಲ್ಕು ಮೊಟ್ಟೆಗಳನ್ನಿಟ್ಟು ಮರಿಮಾಡುತ್ತದೆ. ಸಂತತಿ ನಿಯಂತ್ರಣಕ್ಕಾಗಿ ಸಕಲ ಸಾಧನಗಳು ಲಭ್ಯವಿದ್ದರೂ ಜನಸಂಖ್ಯೆ ಏರಿಸುತ್ತಲೆ ಇರುವ ಮಾನವನು ಈ ಪುಟ್ಟ ಹಕ್ಕಿಯಿಂದಾದರೂ ಕುಟುಂಬಯೋಜನೆ ಪಾಠ

ಕಲಿಯಬಾರದೇ? ಕೇವಲ ಎಂಟು ಲಕ್ಷ ಇದ್ದ ಬೆಂಗಳೂರಿನ ಜನಸಂಖ್ಯೆಯನ್ನು ನಾಲ್ಕು ದಶಕಗಳಲ್ಲಿ ಸುಮಾರು ಏಳು ಪಟ್ಟು ಏರಿಸಿದ ಧೀರರು ನಾವು. ಈ ವೇಗದಿಂದ ಹೊರಟರೆ ಇನ್ನೊಂದು ಶತಕದಲ್ಲಿ ನಾವು ಎಲ್ಲಿ ತಲುಪುತ್ತೇವೆ? ಹೀಗೆ ಊಹಿಸುವುದೂ ಕಷ್ಟವಾಗಿದೆ. ಜನಸಂಖ್ಯೆಯು ಹೆಚ್ಚಳದಂತೆ ನಮ್ಮ ಆಹಾರ ಉತ್ಪಾದನೆಯ ಪ್ರಮಾಣದಲ್ಲಿ ಹೆಚ್ಚಳವಾಗಿಲ್ಲ. ದೈಹಿಕ ಶ್ರಮದ ಅಗತ್ಯದ ಮಹತ್ವದ ಬಗ್ಗೆ ಜೇನ್ನೊಣಗಳಿಂದ ಕಲಿಯಬೇಕು. ಗಂಡು ನೊಣಗಳು ಪುಷ್ಪವತಿಯರನ್ನು ಫಲವತಿಯುರನ್ನಾಗಿ ಮಾಡುವುದು ಮಾತ್ರ ತಮ್ಮ ಕೆಲಸವೆಂದು ಬಗೆದು ಕೆಲಸಗಾತಿಯರು ಕಷ್ಟಪಟ್ಟು ಸಂಚಯಿಸಿದ ಮಧುವನ್ನು ಮೆದ್ದು ಮೋಜಾಗಿ ಇರುತ್ತವೆ. ಆದರೆ ಗೂಡಿನಲ್ಲಿ ಆಹಾರದ ಕೊರತೆಯಾದಾಗ ಇವೇ ಕೆಲಸಗಾತಿ ನೊಣಗಳು, ಸೋಮಾರಿಗಳನ್ನು ದಬ್ಬಿ ಗೂಡಿನಿಂದ ಹೊರಗೆ ಹಾಕುವವು. ರಾಜಾಶ್ರಯ (ರಾಣಿಯ ಆಶ್ರಯು!) ತಪ್ಪಿದ ಈ ಗಂಡುಗಳಿಗೆ ಮೃತ್ಯುವನ್ನು ಸ್ವಾಗತಿಸಿ ವೀರಸ್ವರ್ಗ ಸೇರುವುದೊಂದೇ ಉಳಿದ ಮಾರ್ಗ! ಇರುವೆಗಳೂ ಗಂಡುಗಳಿಗೆ ಪುಕ್ಕಟೆ ಊಟ ಹಾಕದೇ ಅವುಗಳಿಂದ ದೈಹಿಕ ಶ್ರಮ ಮಾಡಿಸುತ್ತವೆ. ನಮ್ಮಲ್ಲೂ ಈ ಕಾನೂನು ಕಡ್ಡಾಯವಾಗಿ ಜಾರಿಗೆ ಬಂದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!

ವಲಸೆ ಹೋಗುವ ಪಶುಪಕ್ಷಿಗಳು ಅನ್ನ ನೀರು ಇಲ್ಲದೇ ಹಗಲು - ರಾತ್ರಿಗಳನ್ನು ಲೆಕ್ಕಿಸದೇ ಸಹಸ್ರಾರು ಕಿಲೋಮೀಟರ್‌ಗಳ ದೂರದ ಪ್ರಯಾಣ ಕೈಕೊಳ್ಳುತ್ತವೆ. ಆದರೆ ಮಾನವನಿಗೆ ೨-೩ ಕಿಲೋಮೀಟರ್‌ಗಳ ದೂರ ಪ್ರಯಾಣಿಸಲು ದ್ವಿಚಕ್ರ, ತ್ರಿಚಕ್ರ ವಾಹನಬೇಕು. ಹೆಲಿಕಾಪ್ಟರ್ ಇದ್ದರೆ ಇನ್ನೂ ಚೆನ್ನ! ಬೆಂಗಳೂರು ನಗರದಲ್ಲಿ ಮೂರು ದಶಕಗಳ ಹಿಂದೆ ಇದ್ದ ಮೋಟರ್ ಸೈಕಲ್, ಸ್ಕೂಟರುಗಳು ಇಪ್ಪತ್ತು ಸಾವಿರ. ಇಂದು ಆ ಸಂಖ್ಯೆ ಏಳು ಲಕ್ಷ ದಾಟಿದೆ. ಭೂಮಾತೆ ಕೋಟ್ಯಂತರ ವರ್ಷಗಳಿಂದ ಕೂಡಿ ಹಾಕಿದ ಪೆಟ್ರೋಲನ್ನು ಮೂರು ದಶಕಗಳಲ್ಲಿಯೇ ಬರಿದುಮಾಡಿದ ಶ್ರೇಯಸ್ಸು ನಮ್ಮದು.

ಕೀಟಗಳ ಕೀಟಲೆ, ಇನ್ನಿತರ ಪ್ರಾಣಿಗಳಿಗೂ ತಪ್ಪಿದ್ದಲ್ಲ. ಆದರೆ ಅವು ನಮ್ಮಂತೆ, ಅತ್ಯಂತ ವಿಷಕಾರಿ ರಾಸಾಯನಿಕಗಳನ್ನು ಸಿಂಪಡಿಸಿ ಪರಿಸರವನ್ನು ಕಲುಷಿತಗೊಳಿಸುವುದಿಲ್ಲ, ಬದಲಾಗಿ ಕೆಲ ನಿರುಪದ್ರವಿ ಕ್ರಮಗಳನ್ನು ತಮ್ಮದನ್ನಾಗಿಸಿವೆ. ಗುಬ್ಬಿಗಳಿಗೆ ಮೈತುಂಬ ಹೇನುಗಳಾದರೆ, ಅವು ಧೂಳಿನಲ್ಲಿ ಹೊರಳಾಡಿ, ಆ ಬಾಧೆಯಿಂದ ಮುಕ್ತಿಪಡೆಯುತ್ತವೆ. ಕುಕ್ಕುಟಸಂಸಾರ ಕಾಲ ಪಂಜುಗಳಿಂದ ಝಾಡಿಸಿಕೊಳ್ಳುತ್ತವೆ. ಕಾಗೆಗಳು ಅವನ್ನು ಚುಂಚಿನಿಂದ ಹೆಕ್ಕಿ ಹೆಕ್ಕಿ ಉದರಕ್ಕೆ ಸೇರಿಸಿಕೊಳ್ಳುತ್ತವೆ. ಗಂಡುಕೋತಿಯ ಹೇನನ್ನು ಹೆಣ್ಣು ಕೋತಿ ಹೆಕ್ಕುವುದು ಸರ್ವವಿದಿತ.

ಕಾಡೆಮ್ಮೆಗಳು ಉಣ್ಣೆಯ ಬಾಧೆಯಿಂದ ಸಂರಕ್ಷಿಸಿಕೊಳ್ಳಲು ಬೆಳ್ಳಕ್ಕಿಗಳನ್ನು ಬರಮಾಡಿಕೊಳ್ಳುತ್ತವೆ. ಆನೆಗಳು ತಮ್ಮ ಮೈಗೆ ಅಲ್ಲಿ ಇಲ್ಲಿ ಆದ ಗಾಯಗಳಿಗೆ ಕೀಟ ಬಾಧೆಯಾಗದಂತೆ ಇದೇ ತಂತ್ರವನ್ನು ಬಳಸುತ್ತವೆ. ಖಡ್ಗಮೃಗದ ಸುತ್ತಲೂ ಸಣ್ಣ ಸಣ್ಣ ಹಕ್ಕಿಗಳು ಸದಾಕಾಲವೂ ಇದ್ದು ತಮ್ಮ ಬಲಾಢ್ಯ ಸ್ನೇಹಿತನಿಗೆ ಕೀಟಗಳು ಬಾಧೆ ಕೊಡದಂತೆ ಎಚ್ಚರವಹಿಸುತ್ತವೆ. ಹುಲುಮನುಜನಿಗೆ ಇಂಥ ಕೀಟ ನಿಯಂತ್ರಣದಲ್ಲಿ ವಿಶ್ವಾಸವಿದ್ದರೆ ಪರಿಸರದ ಪರಿಶುದ್ಧತೆಯನ್ನು ಕಾಯ್ದುಕೊಳ್ಳಲು ಆತ ಅನೇಕ ದಾರಿಗಳನ್ನು ಕಂಡು ಹಿಡಿದುಕೊಳ್ಳಬಹುದು.

ವಿವಿಧ ಕಾರಣಗಳಿಗಾಗಿ ಕಾದಾಡುವುದು ಪ್ರಾಣಿಗಳಲ್ಲಿ ಸಾಮಾನ್ಯ. ಹುಲಿಗಳು ಪರಚಿಕೊಂಡರೆ, ನಾಯಿಗಳು ಕಚ್ಚಿಕೊಳ್ಳುತ್ತವೆ. ಗೋವುಗಳು ಕೋಡುಗಳಿಂದ ಹಣೆದುಕೊಂಡರೆ ಆನೆಗಳು ಸೊಂಡಿಲಿನಿಂದ ಸದೆಬಡೆಯಲು ಯತ್ನಿಸುತ್ತವೆ. ಕೋಳಿಯು ಪ್ರತಿಸ್ಪರ್ಧಿಯ ಗೋಣು ಮುರಿಯಲೆತ್ನಿಸಿದರೆ ಹೆಬ್ಬಾವು ವೈರಿಯನ್ನು ನುಂಗಿಬಿಡಬಹುದು. ಆದರೆ ತನ್ನವರನ್ನೆ ಕೊಂದು ವಿಜಯಿಯಾಗಬಯಸುವ ಮಾನವನಷ್ಟು ಕ್ರೌರ್ಯ ಯಾವ ಪ್ರಾಣಿಯಲ್ಲೂ ಇಲ್ಲ. ಅವನ ಇದೇ ಧೋರಣೆ ಮುಂದುವರಿದಲ್ಲಿ ಕೊನೆಗೆ ಆತ ಪೆಡಂಭೂತಗಳಂತೆ ತಾನೂ ನಶಿಸಿಹೋಗುತ್ತಾನೆ. ಇನ್ನಿತರ ಪಶು - ಪಕ್ಷಿಗಳು ಪರಿಸರದೊಂದಿಗೆ ಒಂದಾಗಿ ತಮ್ಮ ಸಮಸ್ಯೆಗಳಿಗೆಲ್ಲ ತಾವೇ ಪರಿಹಾರ ಕಂಡುಕೊಂಡಿವೆ ಎಂಬುದನ್ನು ಅರಿತು, ತನ್ನ ದುಡುಕುತನವನ್ನು ಆತ ಕೈಬಿಟ್ಟರೆ ಸಕಲ ಜೀವಿಗಳು ಈ ಭೂಮಿಯ ಮೇಲೆ ನೆಮ್ಮದಿಯ ಜೀವನ ನಡೆಸಲು ಸಾಧ್ಯವಾಗುತ್ತದೆ.

the world's oldest cultures, that it leaves the virtual visitor with a heightened curiosity that turns the next trip to the corner grocery into an excursion. Even if you don't have the cash to dash off to India, spend a few minutes pondering a collection of essays on women's roles through Indian history, or read Sages, Sadhus and Swamis, an essay on the holy men of India. Or the much misunderstood erotic art tradition. Or the amazingly developed popular art of Rangoli. Travelers with plane tickets will find calendars and timely information to make a trip much more rewarding.
http://www.kamat.com/

• E-MAIL

**As Appeared in NetSurfer Digest June 08, 2000**

COOL LINK OF THE MONTH
April 2000
...A sea of artistic expressions, a must see. Grab a cup of beverage before you embark on this pleasure surf
The Havyaka Community Website
www.havyaka.com




**Nation on the Net February, 1999**

"...simply, a very good site, that contains eclectic mix of informative, thought provoking, and well written articles...,Kamat deserves to be on the 'best' list"




**May 1998**

**"... Profusely illustrated and quick to download, this presentation is superior in all respects."**

**See Review**

**MILLENIUM KONKANI SAMMELAN 2000**

***Promoting Konkani Heritage***




# HONOR FOR PROMOTING CULTURE THROUGH WEBSITE

**By Ashok Easwaran**

**- Chicago**

Among those honored at the Millennium Konkani Sammelan 2000 was Vikas Kamat, who was recognized for promoting the Konkani heritage through his Website.

Kamat's objective in setting up the site was to provide a forum for "documenting the works of my parents."

The site, set up in 1995, now includes a Tamil Potpourri and Sikhism and Buddhism sites. A "Mahatma Gandhi Album" has proved immensely popular, Kamat told *India Abroad.*

The online edition of *Time magazine* has called the site "a detailed site offering everything from quotes and cartoons to book excerpts and an 'Ask Gandhi' section."

The Indian edition of the Encyclopaedia Britannica has commended it as having "extensive material on the history, culture and diversity of India."

The Website is produced entirely by the Kamat family – Vikas Kamat's father, Krishnanand Kamat, a photographer, mother Jyotsna Kamat, a historian; and his wife Hiryoung Kim Kamat, who is of Korean descent.

"It is a very low- tech site," Kamat said. His Parents, who live in India, do not have a computer. They prepare the content manually and send it to their son by postal mail. The pictures are then scanned, articles retyped and uploaded to the Web site. The original manuscripts and captions are still typed on a 1959 Remington typewriter, Kamat said.

The site gets between 6,000 to 11,000 hits a day, said Kamat, who was born in Jaipur and grew up in Karnataka. He currently works for Software Paradigms in Birmingham, Alabama.

**Year 2000** **August issue of India Abroad**

# SPECIAL RECONITION

Kamat's Potpourri is produced by members of the Kamat family : Krishnanand, Jyotsna, Vikas and Hiryoung Kim. Among them, they share three Doctorates, five Master's and seven other degrees. Included in the Potpourri is the work of Ganesh Burde, Jyotsna's father. Avid researchers and published scholars, they are making available to everyone, everywhere, a priceless treasure trove of information on India in general and Konkani culture, in particular. The Kamat family has our grateful thanks and best wishes towards0 promoting the Konkani culture made by an entire family. All four members of this remarkable "kutumb" put out in countless hours of effort into their beautifully designed Website (URL : http://www.kamat.com/).

ವಿಜ್ಞಾನಿ, ಸಾಹಿತಿ, ಛಾಯಾಚಿತ್ರಕಾರ, ಪರಿಸರ ಪ್ರೇಮಿ ಹೀಗೆ ಬಹುಮುಖ ಪ್ರತಿಭೆಯನ್ನು ಮೆರೆದವರು ಡಾ. ಕೃಷ್ಣಾನಂದ ಕಾಮತರು (1934-2002). ಸೂಕ್ಷ್ಮ ನಿರೀಕ್ಷಣೆ, ಜಿಜ್ಞಾಸೆ, ಚಿಕಿತ್ಸಕ ನಿಲುವುಗಳೊಂದಿಗೆ ಅಪಾರವಾದ ಬದುಕಿನ ಪ್ರೀತಿಯನ್ನು ಮೈಗೂಡಿಸಿಕೊಂಡಿದ್ದರು. ಅವರ ಇಪ್ಪತ್ತೆರಡು ಕೃತಿಗಳು ಹಾಗೂ ಲಕ್ಷಗಟ್ಟಲೆ ಚಿತ್ರಗಳು, ಅವರ ವಿವಿಧಾಸಕ್ತಿಗಳನ್ನು ಹಾಗೂ ಸಮಾಜಮುಖಿ ನಿಲುವನ್ನು ಪ್ರತಿಬಿಂಬಿಸುತ್ತವೆ.

ಆಕಸ್ಮಿಕವಾಗಿ ಕಣ್ಮರೆಯಾದ ಕೃಷ್ಣಾನಂದರ ಸಾಹಿತ್ಯ ಹಾಗೂ ಕಲಾ-ಪ್ರಕಾರಗಳನ್ನು ಸಂಘಟಿತವಾಗಿ ಕಾಯ್ದಿರಿಸುವ ಪ್ರಯತ್ನ, 'ಕೃಷ್ಣಾನಂದ ಕಾಮತ ಪ್ರತಿಷ್ಠಾನ'ದ ಸ್ಥಾಪನೆಯೊಂದಿಗೆ (2003) ಪ್ರಾರಂಭವಾಯಿತು. ಅವರ ಜೀವನಾಸಕ್ತಿಗಳಿಗೆ ನಿಕಟವಿದ್ದ ಪ್ರವಾಸ, ಚಾರಣ, ಬರಹ, ಛಾಯಾಚಿತ್ರಗಳಲ್ಲಿ ತರಬೇತಿ ನೀಡುವ ಉದ್ದೇಶ, ಪ್ರತಿಷ್ಠಾನಕ್ಕೆ ಇದೆ. ಅವರ ಹೆಸರಿನ ಸಮುದಾಯಭವನ ಹಾಗೂ ಉಚಿತ ವಾಚನಾಲಯಗಳು ಹೊನ್ನಾವರದಲ್ಲಿ ರೂಪಗೊಳ್ಳುತ್ತಲಿವೆ. ಕಾಮತರ ಜೀವನ ಸಾಧನೆಗಳ ಕುರಿತು ನಾಡಿನ ಹೆಸರಾಂತ ಲೇಖಕರು ಹಾಗೂ ನಿಕಟವರ್ತಿಗಳು ಬರೆದ ಲೇಖನಗಳು, ವಿಮರ್ಶೆ, ಪತ್ರಗಳು, ಅವರ ಕೆಲ ಕಲಾಕೃತಿಗಳು ಹಾಗೂ ಅಪ್ರಕಟಿತ ಲೇಖನಗಳ ಮಾದರಿಗಳನ್ನು ಒಳಗೊಂಡ ಸಂಸ್ಮರಣ ಸಂಪುಟ 'ಕಮ್ಮಟಿಗ', ಪ್ರತಿಷ್ಠಾನದವತಿಯಿಂದ ಈ ವರ್ಷದ ಪ್ರಾರಂಭದಲ್ಲಿ ಪ್ರಕಟವಾಯಿತು.

ಈಗ ಎರಡನೆಯ ಪ್ರಯತ್ನವಾಗಿ 'ಹಿಂಗಿದ್ರು ನಮ್ ಕಮ್ತಿ' ಬೆಳಕು ಕಾಣುತ್ತಿದೆ. ಹೆಸರೇ ಸೂಚಿಸುವಂತೆ, ಕಾಮತರನ್ನು ವಿದ್ಯಾರ್ಥಿಯಾಗಿ, ಸಹೋದ್ಯೋಗಿಯಾಗಿ, ಸ್ನೇಹಿತರಾಗಿ ಕಂಡವರು, ಅನೌಪಚಾರಿಕವಾಗಿ ನೆನಪಿಸಿಕೊಂಡಿದ್ದಾರೆ. ಜೊತೆಗೆ ಅವರನ್ನು ಕಾಣದೆಯೂ ಬರಹಮಾತ್ರದಿಂದ ಅರಿತ ಎಳೆಯರು ತಾವು ಕಂಡುಕೊಂಡ ವ್ಯಕ್ತಿಯನ್ನು ಚಿತ್ರಿಸಿದ್ದಾರೆ. ಎಲೆಮರೆಯ ಕಾಯಾಗಿಯೇ ಬದುಕಿದ ಕೃಷ್ಣಾನಂದ ಕಾಮತರ ಅನಾವರಣದ ಯತ್ನ ಇಲ್ಲಿದೆ.